# ಕೊಡಗು  ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

K.R.N.N. 240 ಸಂಪುಟ : 2 ಸಂಚಿಕೆ : 16 ಆಗಸ್ಟ್ 15 ರಿಂದ 30–1998 ಪುಟಗಳು : 24 ರೂ. 5

ಕೊಡಗು ಗೌಡ ವಿದ್ಯಾರ್ಥಿ ನಿಲಯ

[ವಿವರ ಒಳಪುಟಗಳಲ್ಲಿ]

## ಕೊಡಗು ಅರೆಭಾಷೆ ಭಾಂಧವರಿಂದ
## 50ನೇ ಸುವರ್ಣ ಸ್ವಾತಂತ್ರ್ಯೋತ್ಸವ ಆಚರಣೆ

---

## ಸುಂದರ ಸುವರ್ಣ ಸ್ವಾತಂತ್ರ್ಯೋತ್ಸವದ ಬಗ್ಗೆ ನಿಮ್ಮ ಅನಿಸಿಕೆ ಏನ್ ?

ಸುವರ್ಣ ಸ್ವಾತಂತ್ರ್ಯೋತ್ಸವವನ್ನು ಆಚರಿಸ್ತಿರೊ ನಿಮ್ಗೆ ಅನ್ನಿಸಿದನ್ನ ಬರ್ದ್ ಕಳ್ಸಿ. ನಿಮ್ಮ ಅನುಭವ ಏನ್ ? ಎತ್ತ ಏನ್ಂತೇಳಿ. ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಹಿಂದಿನ 50 ವರ್ಷಗಳಿಂದ ಬದಲಾವಣೆ ಆಗಿರ್ವ ನಮ್ಮ ಜನಾಂಗದ ಬಗ್ಗೆ ನಿಮ್ಮ ಬರವಣಿಗೆನ ಸಂಕ್ಷಿಪ್ತವಾಗಿ ಆಹ್ವಾನಿಸ್ತಾ ಒಳೊ

ಇಂದ್ ನಮ್ಮ ಜನ ಎಷ್ಟರಮಟ್ಟಿಗೆ ಈ ಬಗ್ಗೆ ತಿಳ್ದ್‌ಕೊಂಡೊಳೊ ತೇಳುವುದನ್ನ ನಮಿಗೆ ಬರ್ದ್ ಕಳ್ಸಿ ಕೊಡೊಕುತ ಸಂಗಾತಿ ಬಯ್ಸಿದೆ.

—ಸಂಪಾದಕಿ

## ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ**

ಮುದ್ರಕರು :
**ಮಣ್ಣಂಡ್ರ ಕೆ. ತಮ್ಮಯ್ಯ**
**ಆಶೀರ್ವಾದ್ ಪ್ರಿಂಟರ್ಸ್,**
180/ಎ, 6ನೇ ಮುಖ್ಯ ರಸ್ತೆ,
ವಿನಾಯಕನಗರ, ಮೈಸೂರು-12

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 35, **"ಸವಿತಾ ನಿಲಯ"**
1ನೇ ಕ್ರಾಸ್, 4ನೇ ಬ್ಲಾಕ್,
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ,
ಜಯಲಕ್ಷ್ಮಿಪುರಂ, ಮೈಸೂರು-12.
ಫೋನ್ : **516771**

**ಮಡಿಕೇರಿಯ ನಮ್ಮ ವಿಳಾಸ**

**ಕೊಡಗು ಸಂಗಾತಿ**
C/o ನಂಗಾರ್ ಆಡಿಯೋ ವೀಡಿಯೊ
ಕೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ-571 201


## ಒಳನೋಟ

ಪುಟಗಳು



### ಅರೆ ಭಾಷೆಕ್ ವಿಭಾಗ



**ಚಂದಾ ವಿವರ**

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

# ಸಂಪಾದಕೀಯ

ಭರತ ಖಂಡವನ್ನಾಳಿದ ಭರತ ಸಾಮ್ರಾಜ್ಯದ ತಂದೆ ದುಶ್ಯಂತ ಭೇಟೆಗಾಗಿ ಕಣ್ವ ಋಷಿಗಳ ಆಶ್ರಮಕ್ಕಾಗಿ ಹಾದು ಹೋದಾಗ ಶಕುಂತಳೆಯ ಭೇಟಿಯಾಗಿ ಅವರಿಬ್ಬರಲ್ಲಿ ಪ್ರೀತಿ ಉಂಟಾಗಿ ಕೆಲವು ದಿನಗಳವರೆಗೆ ಕಣ್ವಾಶ್ರಮದ ಕಾಡಿನಲ್ಲಿ ವಿಹರಿಸಿದ್ದ ಕಾಡು ರಾಜಸ್ಥಾನದಲ್ಲಿ ಈಗ ಬರೇ ಮರುಭೂಮಿ ಯಾಗಿದೆ. ಹಿಂದೆ ದಿಲ್ಲಿಯನ್ನು ಆಳುತ್ತಿದ್ದ ಮೊಗಲ ಸಾಮ್ರಾಜ್ಯದ ಚಕ್ರವರ್ತಿ ದಟ್ಟವಾದ ಕಾಡು ಕಡಿದು ಭೇಟೆಯಾಡ ಬೇಕಿತ್ತಂತೆ. ಈ ಕಾಡುಗಳೆಲ್ಲಾ ನಾಶವಾಗಿ ಈಗ ಮರುಭೂಮಿ ಯಾಗಿದೆ. ಪರಿಸ್ಥಿತಿ ಹಾಗಿರುವಾಗ ನಮ್ಮ ಕಾಡುಗಳ ನಾಶ ಮಾಡುವ ಕೆಲಸ ಮುಂದುವರಿಯುತ್ತಾ ಹೋಗುತ್ತಿವೆ. ಪಶ್ಚಿಮಘಟ್ಟದಲ್ಲಿದ್ದ ಯಾಲಕ್ಕಿ ಮತ್ತು ಕಾಫಿ ಸಾಗುವಳಿ ಮಲೆಗಳಲ್ಲಿದ್ದ ಮರಗಳನ್ನು ಹಣದಾಸೆಗಾಗಿ ಕೊಟ್ಟು ಕೋಟ್ಯಾಂತರ ರೂಪಾಯಿ ಬೆಲೆಬಾಳುವ ಮರ, ಬೆಟ್ಟಗಳೆಲ್ಲಾ ಬೋಳಾಗಿವೆ. ಬ್ರಿಟಿಷರು ಕೊಡಗಿಗೆ ಬರುವುದಕ್ಕೆ ಮೊದಲು ಕೊಡಗಿನ ಕಾಡುಗಳಲ್ಲಿ ಯಾಲಕ್ಕಿ ಅಲ್ಲದೆ ಕರಿಮೆಣಸು, ಬಾಳೆ, ಕಿತ್ತಳೆ ಬೆಳೆಸುತ್ತಿದ್ದರು. ಕಾಫಿಯನ್ನು ಕೊಡಗಿನಲ್ಲಿ ವ್ಯಾಪಾರದ ದೃಷ್ಟಿಯಿಂದ ಬೆಳೆಸದೆ ಇದ್ದುದರಿಂದ ಕಾಫಿ ತೋಟ ಮಾಡುವುದಕ್ಕಾಗಿ ಮರವನ್ನು ಕಡಿಯುತ್ತಿರಲಿಲ್ಲ. ಹಾಗಾಗಿ, ಮನೆ ಬಳಕೆಗೆ ಸೌದೆಗಾಗಿ ಬೇಕಾದುದಕ್ಕಿಂತ ಹೆಚ್ಚು ಮರಗಳನ್ನು ಕಡಿಯುತ್ತಿದ್ದರು. ಅಡಿಗೆಗೆ ಮರಕಡಿದೇ ಸೌದೆ ಮಾಡುವ ಪರಿಪಾಠ ಪ್ರಾರಂಭವಾಗಿ ಈಗ ಕಾಡೆಲ್ಲಾ ಬರಿದಾಗಿವೆ ಯಾರೊಬ್ಬರಲ್ಲೂ ಮರಗಳನ್ನು ಬೆಳೆಸಿ ಉಪಯೋಗಿಸುವ ಹವ್ಯಾಸವೇ ಇಲ್ಲ. ಪ್ರತಿಯೊಬ್ಬರೂ ತನ್ನ ಹಕ್ಕಿನಲ್ಲಿರುವ ಮರವನ್ನು ಯಾವ ಭಯವೂ ಇಲ್ಲದೆ ಕಡಿಯುತ್ತಾರೆಯೇ ಹೊರತು, ಕಡಿದ ಮರದ ಬದಲಾಗಿ ಬೇರೆ ಮರ ನೆಡುವುದೇ ಇಲ್ಲ. ವರ್ಷಕ್ಕೊಂದು ಸಲ ಆಚರಿಸುವ ವನಮಹೋತ್ಸವ ಬರೇ ಕಾಗದಲ್ಲಿ ಮಾತ್ರ ಸರ್ಕಾರ ಎಷ್ಟೇ ಯೋಜನೆಗಳನ್ನು ಮಾಡಿದರು. ಜನರು ಈ ಯೋಜನೆಗಳ ಮೇಲೆ ಯಾವ ಪ್ರತಿಕ್ರಿಯೆ ತೋರಿಸುವುದಿಲ್ಲ. ಮರಗಳನ್ನು ಕಾಪಾಡುವ ಹೊಣೆ ಸರ್ಕಾರದ್ದೇ ಹೊರತು ಜನರದಲ್ಲ ಎಂಬ ಭಾವನೆ ಸರ್ವ ಸಾಮಾನ್ಯವಾಗಿದೆ. ಅಡಿಗೆ ಮನೆಯಲ್ಲಿ, ಬಚ್ಚಲ ಮನೆಗಳಲ್ಲಿ ಓಬಿರಾಯನ ಕಾಲದ ಒಲೆಗಳಿದ್ದು ನಮ್ಮ ಊರುಗಳಲ್ಲಿ ಮೇಲೇರಿ ಹಬ್ಬದಲ್ಲಿ ಬೆಂಕಿ ಉರಿಸುವಂತೆ ಒಲೆಗಳಲ್ಲಿ ಗೌದೆ ಉರಿಯುತ್ತಿರುತ್ತದೆ. ಮದುವೆ ಮುಂಜಿಗಳಲ್ಲೂ ಸಹ ಅಷ್ಟೆ. ಒಂದು ಮದುವೆಗೆ ಕಡಿಮೆ ಪಕ್ಷ ಅರ್ಧ ಲಾರಿ ಸೌದೆಯನ್ನಾದರೂ ಉರಿಸುತ್ತಾರೆ. ಹೀಗಾಗಿ ಹಿಂದೆ ಇದ್ದ ಕಾಡುಗಳೆಲ್ಲಾ ನಾಶವಾಗಿ ವಾತಾವರಣವೇ ಕುಲಷಿತಗೊಂಡಿದೆ. ಕಾಡುಗಳಲ್ಲಿ ಕಾಫಿ ಯಾಲಕ್ಕಿ ತೋಟಗಳಲ್ಲಿ

## ವನ ಸಿರಿ ನಾಶ

ಒಣಗಿರುವ ಸೌದೆಗಳನ್ನು ಹಿಂದಿನ ಕಾಲದಲ್ಲಿ ಜೋಡಿಸುವ ರೀತಿಯಲ್ಲಿ ಜೋಡಿಸಿ ಅವುಗಳನ್ನು ಕಾಪಾಡುವ ಶ್ರದ್ಧೆಯನ್ನು ಈಗಿನ ಯುವಕ/ಯುವತಿಯರು ವಹಿಸುತ್ತಿಲ್ಲ. ಕಾಡಿನಲ್ಲಿ ಬೇಕಾದಷ್ಟು ತರಗೆಲೆಗಳನ್ನು ಬೇಸಿಗೆ ಕಾಲದಲ್ಲಿ ಬಚ್ಚಲು ಮನೆಗಳಿಗೆ ಉಪಯೋಗಿಸಿ ಸೌದೆಯ ಖರ್ಚನ್ನು ಕಡಿಮೆ ಮಾಡಬಹುದು ಕೊಡಗಿನಲ್ಲಿ ತೆಂಗಿನ ಮರದ ರೆಂಬೆ, ಅಡಿಕೆ ಮರದ ಸೋಗೆಗಳನ್ನು ಬಚ್ಚಲಿಗೆ ಉಪಯೋಗಿಸುವ ಯೋಚನೆಯೇ ಇಲ್ಲ. ವಿಜ್ಞಾನ ಇಷ್ಟು ಮುಂದುವರಿದಿರುವಾಗ ಅಂದರೆ, ನಮಗೆ ಬೇಕಾದಷ್ಟು ದನಕರುಗಳಿರುವಾಗ ಅವುಗಳ ಸಗಣಿಯನ್ನು ಉಪಯೋಗಿಸಿ ಸಗಣಿಯ ಗ್ಯಾಸ್‌ನಿಂದ ಬೆಂಕಿಯನ್ನೂ, ಬೆಳಕನ್ನೂ ಹೊಂದಬಹುದು. ಸಗಣಿ ಅನಿಲವನ್ನು ತಯಾರು ಮಾಡಲು ಸರ್ಕಾರ ಈ ವಿಷಯದಲ್ಲಿ ನೀಡುವ ಸಹಾಯಧನವನ್ನು ಹೊಂದಿಕೊಂಡು ಅನಿಲ ಭಾವಿ ಮತ್ತು ಉರಿಯುವ ಒಲೆಯನ್ನು ಕೊಂಡುಕೊಂಡು ಸೌದೆ ಉರಿಸುವುದನ್ನು ಕಡಿಮೆ ಮಾಡಬಹುದು.

ಈ ವಿಷಯದಲ್ಲಿ ಕೊಡಗಿನಲ್ಲಿ ಯಾವ ರೀತಿಯ ಪ್ರಗತಿಯೂ ಆಗದೆ ಬಹಳ ಹಿಂದುಳಿದಿದ್ದೇವೆ. ಮನೆ ಮಠ, ಕಾರು, ಮೋಟಾರ್ ಬೈಕ್, ಜೀಪುಗಳ ಮೇಲೆ ಪ್ರಗತಿ ಸಾಧಿಸಿದಷ್ಟು ಮರಗಳನ್ನು ರಕ್ಷಿಸುವ, ಮರಗಳನ್ನು ಉಳಿಸುವ, ಮರಗಳನ್ನು ಬೆಳೆಸಿ ನಮ್ಮ ಸಸ್ಯ ಸಂಪತ್ತನ್ನು ಹೆಚ್ಚಿಸಿಕೊಳ್ಳುವ ವಿಷಯದಲ್ಲಿ ಗ್ರಾಮಾಂತ ಪ್ರದೇಶದ ಯುವಕ/ಯುವತಿಯರು ಕಣ್ತೆರೆದು ನೋಡಿ ಮುಂದಿನ ಪೀಳಿಗೆ ಈ ವಿಷಯದಲ್ಲಿ ಈಗಿನವರನ್ನು ನಾವು ಮಾಡುತ್ತಿರುವ ಮರಗಳ ನಾಶದ ವಿಷಯದಲ್ಲಿ ಶಪಿಸಿಕೊಂಡು ತಮ್ಮ ಜೀವನದಲ್ಲಿ ಪರಿಸರದ ಅಧೋಗತಿಗಾಗಿ ಕೊರಗುವ ಸಂದರ್ಭವನ್ನು ತಪ್ಪಿಸಬೇಕು. ನಮ್ಮ ತಾಯ್ನಾಡು ಸದಾ ಹಚ್ಚ ಹಸಿರಿನಿಂದ ಕಂಗೊಳಿಸಬೇಕು.

---

## ಹಿತನುಡಿ

ಮಗನನ್ನು ಹಡೆದು, ಅವನ ಅಯೋಗ್ಯತನವನ್ನು ಕಣ್ಣಾರೆ ಕಂಡು, ಹೆಚ್ಚಿನ ದುಃಖ ಅನುಭವಿಸುವ ತಾಯಿಗಿಂತ ಹೆಚ್ಚು ದುಃಖಿತರು ಇನ್ನೊಬ್ಬರು ಈ ಲೋಕದಲ್ಲಿರುವುದಿಲ್ಲ.

—ಟೆನಿಸನ್.

# ಅಪೂರ್ವ ವೈದ್ಯ ಸಹೋದರರು

**ಬೆ**ಳೆಯುವ ಸಿರಿ ಮೊಳಕೆಯಲ್ಲಿ ಎಂಬ ನಾಣ್ನುಡಿಯಂತೆ ಎಳೆಯದರಲ್ಲೇ ಶಿಸ್ತು ಬದ್ಧ ಜೀವನಕ್ಕೆ ಒಳಪಟ್ಟವರು ಡಾ॥ ನವೀನ್ ಮತ್ತು ಡಾ॥ ಪ್ರವೀಣ್ ಎಂಬ ಅಪೂರ್ವ ಸಹೋದರರು.

ಮದೆನಾಡಿನ ನೆರಿಯನ ಸೋಮಯ್ಯ ಮತ್ತು ಸರಸ್ವತಿಯರ ಮೂವರು ಮಕ್ಕ ಳಲ್ಲಿ ಇಬ್ಬರು ಗಂಡು ಮಕ್ಕಳು. ಒಬ್ಬಳು ಹೆಣ್ಣು ಮಗಳು.



ಡಾ॥ ಎನ್. ಎಸ್. ನವೀನ್

ಪುತ್ರರಿಬ್ಬರೂ ಮಡಿಕೇರಿ ತಾಲ್ಲೂಕಿನ ಬೆಳಕುಮಾನಿ ಶಾಲೆಯಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಪಡೆದು ಪುತ್ತೂರಿನ ಸೈಂಟ್ ಫಿಲೋಮಿನಾ ಪ್ರೌಢಶಾಲೆಯಲ್ಲಿ ಪ್ರೌಢ ವಿದ್ಯಾಭ್ಯಾಸ ಪಡೆದರು. ನಂತರ ಅದೇ ಹೆಸ ರಿನ ಕಾಲೇಜಿನಲ್ಲಿ ಪಿ. ಯು. ಸಿ. ಯಲ್ಲಿ ಪಿ.ಸಿ.ಎಂ.ಬಿಯನ್ನು ಅಭ್ಯಾಸ ಮಾಡಿ ಶೇ. 90ಕ್ಕಿಂತ ಅಧಿಕ ಅಂಕದೊಂದಿಗೆ ತೇರ್ಗಡೆ ಹೊಂದಿದರು. ನಂತರ **N.E.T.** ಪರೀಕ್ಷೆಯಲ್ಲೂ ಶೇ. 90ಕ್ಕಿಂತ ಅಧಿಕ ಅಂಕ ಬಾಚಿಕೊಂಡು ವೈದ್ಯಕೀಯ ವಿದ್ಯಾ ಭ್ಯಾಸದ ಮೆಟ್ಟಿಲು ತುಳಿದರು. ಮೈಸೂರಿ ನಲ್ಲಿ **M.B.B.S.** ಪದವಿಯ ಪ್ರಥಮ ದರ್ಜೆಯ ವಿಜಯದ ಮಾಲೆ ಇವರ ಕೊರ ಳನ್ನು ಅಲಂಕರಿಸಿತು.

ಅಣ್ಣ ಡಾ॥ ನವೀನ್ ನೇರ ಉದ್ಯೋಗದ ಮೆಟ್ಟಲೇರಿ ಈಗ ಕೊಡಗಿನ ಸಿದ್ಧಾಪುರ ಸರಕಾರಿ ಆಸ್ಪತ್ರೆಯಲ್ಲಿ ವೈದ್ಯಾಧಿಕಾರಿ ಯಾಗಿ ಖಾಯಂ ಉದ್ಯೋಗಿಯಾಗಿದ್ದಾರೆ. ಸಿದ್ಧಾಪುರದ ಸುತ್ತಲಿನವರು ಒಬ್ಬ ಒಳ್ಳೆಯ ವೈದ್ಯಾಧಿಕಾರಿಯನ್ನು ಪಡೆದುದರ ಬಗ್ಗೆ ಹೆಮ್ಮೆ ವ್ಯಕ್ತಪಡಿಸುತ್ತಿದ್ದಾರೆ. ವಯೋ ಧರ್ಮಕ್ಕನುಸಾರವಾಗಿ ಇವರು ಈ ವರ್ಷದ ಡಿಸಂಬರ್ ತಿಂಗಳಿನಲ್ಲಿ ಗೃಹಸ್ಥರಾಗಲಿರು ವರು. ಕೊಡಗಿನ ಚನ್ನಯ್ಯನ ಕೋಟೆ ಎಂಬಲ್ಲಿಯ ಆಸ್ಪತ್ರೆಯಲ್ಲಿ ಸೇವೆಯಲ್ಲಿರುವ ಡಾ॥ ರಾಜೇಶ್ವರಿಯವರು ಡಾ॥ ನವೀನರ ಮನತುಂಬಿದ ಮಡದಿಯಾಗಲಿದ್ದಾರೆ. ಒಂದೇಮನೆಯಲ್ಲಿ ತ್ರಿಮೂರ್ತಿ ವೈದ್ಯರನ್ನು ಹೊಂದಲಿರುವುದು ಮದೆನಾಡಿನ ಸೌಭಾಗ್ಯ.

ತಮ್ಮ ಡಾ॥ ಪ್ರವೀಣ್ ಮಹಾರಾಷ್ಟ್ರ ದಲ್ಲಿ ಎಂ. ಡಿ. ಪಡೆದ ಪ್ರವೀಣ. ಪ್ರಸೂತಿ ಮತ್ತು ಸ್ತ್ರೀರೋಗ ತಜ್ಞರು. ಇವರಿಗೆ ನೆರೆಯ ಕೇರಳ ರಾಜ್ಯದ ಖಾಸಗಿ ಆಸ್ಪತ್ರೆ ಯೊಂದು ಈಗಾಗಲೇ ಆಮಂತ್ರಣ ನೀಡಿದೆ. ಕರ್ನಾಟಕಕ್ಕೇ ಶ್ರೀಯುತರ ಸೇವೆ ಸಲ್ಲ ಬೇಕಿತ್ತು. ಇರಲಿ, ಕನ್ನಡ ನಾಡಿನ ಹೆಮ್ಮೆಯ ಕುವರ ಎಲ್ಲಾದರೂ ಇರಲಿ, ಕನ್ನಡ ನಾಡಿನ ಕಂಪನ್ನು ಸದಾ ಚೆಲ್ಲಲಿ. ವೈದ್ಯ ಸೇವೆಗೆ ಸಮರ್ಪಿಸಿಕೊಂಡ ಇವರು 'ಆರೋಗ್ಯ ಭಾಗ್ಯ' ಎಂಬ ಆರೋಗ್ಯದ ಬಗೆಗಿನ ಅಂಕಣವನ್ನು ಬರೆಯುತ್ತಾರೆ. ಈಗಾಗಲೇ ಇವರ ಹಲವಾರು ಲೇಖನಗಳು ಕೆಲವು ಪತ್ರಿಕೆಗಳಲ್ಲಿ ಬೆಳಕು ಕಂಡಿವೆ. ವೈದ್ಯ ಸೇವೆಯೊಂದಿಗೆ ಸಾಹಿತ್ಯ ಸೇವೆ ಯಲ್ಲೂ ತೊಡಗಿದ ಇವರ ಚಟುವಟಿಕೆ ಕನ್ನಡಿಗರಿಗೊಂದು ವರ ಪ್ರಸಾದವೇ ಸರಿ. ಸಾಮಾನ್ಯವಾಗಿ ಸೇವೆಯಲ್ಲಿದ್ದುಕೊಂಡು ಬರಹವನ್ನೂ ಮೈಗೂಡಿಸಿಕೊಳ್ಳುವವರು ವಿರಳ. ಅಂಥಾ ವಿರಳರ ಸಾಲಿನಲ್ಲಿ ಇವರು ಒಬ್ಬರು.

ಹಳ್ಳಿಯನ್ನು ಸದಾ ಪ್ರೀತಿಸುವ ಇವರು ಹಳ್ಳಿ ಆಸ್ಪತ್ರೆಯಲ್ಲಿ ಸೇವೆ ಸಲ್ಲಿಸುವ ಬಗೆಗೆ ಅಪಾರ ಕಾಳಜಿ ಇದೆ. ಆದರೆ ಹಳ್ಳಿಗಳ ಲ್ಲಿಯ ಆಸ್ಪತ್ರೆಗಳಲ್ಲಿ ಸೂಕ್ತ ಸೌಲಭ್ಯಗಳಿ ಲ್ಲದೆ ಇರುವುದರಿಂದ ತಾವು ಪಡೆದ ವಿದ್ಯೆ ಯನ್ನು ಪ್ರಯೋಗಿಸಲಾಗುವುದಿಲ್ಲ ಎನ್ನು ತ್ತಾರೆ ಡಾ॥ ಪ್ರವೀಣ್. ಕಲಿತಷ್ಟೂ ಸಾಲದು, ಇನ್ನು ಕಲಿಯಬೇಕು, ಮತ್ತಷ್ಟೂ ಕಲಿಯಬೇಕೆನ್ನುವ ಇವರ ಜ್ಞಾನ ದಾಹ ಎಷ್ಟಿದೆ ಎಂದೆನಿಸದೆ ಇರದು.



ಡಾ॥ ಎನ್. ಎಸ್. ಪ್ರವೀಣ್

ನಿಜ ಹೇಳಬೇಕೆಂದರೆ ನಾವು ಇಂಥವರಿಂದ ಕಲಿಯಲು ಸಾಕಷ್ಟಿದೆ.

ನಾನು ಇವರಿಬ್ಬರನ್ನು ಕಳೆದ 16ವರ್ಷ ಗಳಿಂದಲೂ ಬಲ್ಲೆ. ಚಿಕ್ಕ ಹುಡುಗರಾಗಿ ದ್ದಾಗಿನಿಂದಲೂ ಅನಗತ್ಯವಾಗಿ ಅಂಗಡಿಗಳ ಮುಂದೆಯಾಗಲಿ, ಹೋಟೆಲ್ ಮುಂತಾ ದೆಡೆಗಳಲ್ಲಾಗಲಿ ಕಾಲಹರಣ ಮಾಡಿದವರಲ್ಲ. ಪುತ್ತೂರಿನಲ್ಲಿ ಓದುತ್ತಿದ್ದಾಗಲೂ ಕೂಡ ಮದೆನಾಡಿನ 'ಕವಳೆ ಪೇಟೆ'ಯ ಕ್ಷೌರದ ಅಂಗಡಿಯಲ್ಲೇ 'ಕ್ಲೋಸ್ ಹೇರ್‌ಕಟ್' ಮಾಡಿಸಿಕೊಳ್ಳುತ್ತಿದ್ದರು.

'ನೀವಿಬ್ಬರೂ ವೈದ್ಯಕೀಯ ಕ್ಷೇತ್ರ ವನ್ನೇ ಯಾಕೆ ಆಯ್ಕೆ ಮಾಡಿಕೊಂಡಿ ದ್ದೀರಿ' ಎಂದು ಕೇಳಿದರೆ ಅವರ ಉತ್ತರ : 'ನಾವು ಚಿಕ್ಕವರಿದ್ದಾಗ ನಮ್ಮ ಮನೆಕಡೆ ಗಾಗಿ ಕೆಲವು ರೋಗಿಗಳನ್ನು ಮಂತ್ರ

ವಾದಿಯ ಬಳಿ ಕರೆದುಕೊಂಡು ಹೋಗು ತ್ತಿದ್ದರು. ಕೆಲವರು ಹೋದ ವಾಹನದಲ್ಲೇ ಹೆಣವಾಗಿ ಬಂದದ್ದೂ ಇದೆ. ಆಸ್ಪತ್ರೆಗೆ ಹೋಗದೆ ಮಂತ್ರವಾದಿಯ ಬಳಿ ಹೋಗು ತ್ತಿದ್ದವರಿಗೆ ತಮ್ಮ ತಂದೆ ಬುದ್ಧಿ ಹೇಳು ತ್ತಿದ್ದರು. ಇದನ್ನೆಲ್ಲಾ ನೋಡುತ್ತಿದ್ದ ನಮಗೆ ನಾವೂ ವೈದ್ಯರಾಗಿದ್ದರೆ ಅಂಥವ ರಿಗೆ ಬುದ್ಧಿ ಹೇಳಿ ಅವರ ಕಾಯಿಲೆ ವಾಸಿ ಮಾಡಬಹುದಿತ್ತಲ್ಲ ಎಂದುಕೊಳ್ಳುತ್ತಿ ದ್ದೆವು. ಆ ಆಸೆ ಇಂದು ನೆರವೇರಿದೆ' ಎನ್ನು ತ್ತಾರೆ.

ನಿವೃತ್ತ ಶಿಕ್ಷಕ ಶ್ರೀ ಸೋಮಯ್ಯನವರ ಪುತ್ರರಾದ ಡಾ|| ನವೀನ್ ಮತ್ತು ಡಾ|| ಪ್ರವೀಣರನ್ನು ಯಾರಾದರೂ ಒಟ್ಟಿಗೆ ನೋಡಿದವರು ಇವರಿಬ್ಬರು 'ಟ್ವಿನ್ಸಾ' ಅಂತ ಪ್ರಶ್ನಿಸುತ್ತಾರೆ. ಒಂದೇ ತೊಟ್ಟಿಲಿ ನಲ್ಲಿ ಮಲಗಿ, ಒಂದೇ ತಟ್ಟೆಯಲ್ಲಿ ಉಂಡು, ಒಂದೇ ಶಾಲೆ ಕಾಲೇಜುಗಳಲ್ಲಿ ವ್ಯಾಸಂಗ ಮಾಡಿ, ಒಂದೇ ರೀತಿಯ ಉದ್ಯೋಗವನ್ನು ಹಿಡಿದ ಈ ಸೋದರರಿಗೆ ನಮ್ಮ ಅಭಿನಂದನೆ ಗಳು.

ಇನ್ನು ಕಲಿಯಬೇಕೆನ್ನುವ ಇವರು ಪ್ರಾಮಾಣಿಕ ವೈದ್ಯ ಸಹೋದರರು!! ಅಗಣಿತ ರೋಗಿಗಳ ಪಾಲಿಗೆ ಇಂಥವರು 'ದೇವರು'. ಇವರಿಗೆ ನಮ್ಮೆಲ್ಲರ ಶುಭಾಶಯ ಗಳು.

ಸಂದರ್ಶನ : ಬಿ. ಆರ್. ಜೋಯಪ್ಪ

---

### –: ನಗು :–

ನಾನು ನಿನ್ನ ಮೊದಲ
ನೋಟದಲಿ ಕಂಡಾಗ ||
ನನ್ನನು ನೋಡಿ
ನಸುನಕ್ಕು ಮರೆಯಾದೆ ನೀ ನಾಗ||
ನಾ ಮಾರನೆಯ ದಿನ
ನಿನ್ನ ಮುಖ ನೋಡಿದಾಗ
ಅದರಲ್ಲಿ ಎದ್ದು ಕಾಣುತಿತ್ತು
ಕೆಂಗುಲಾಬಿಯ ನಗು ||

ಕೊಲ್ಲಮದ ಕೆ. ಲಕ್ಷ್ಮೀಪತಿ, ಬೆಂಗಳೂರು.

## ಕೊಡಗು ಗೌಡ ಬಾಂಧವರಿಂದ ಸುವರ್ಣ ಸ್ವಾತಂತ್ರ್ಯೋತ್ಸವ ಆಚರಣೆ

ದಿನಾಂಕ 15–8–98ನೇ ಶನಿವಾರ ಬೆಳಿಗ್ಗೆ 8 ಗಂಟೆಗೆ ಜಯಲಕ್ಷ್ಮಿಪುರಂನ ಕೊಡಗು ಗೌಡ ವಿದ್ಯಾರ್ಥಿನಿಲಯದ ಆವ ರಣದಲ್ಲಿ ಕೊಡಗು ಗೌಡ ಸಮಾಜದ ಸದಸ್ಯರು, 'ಕೊಡಗು ಸಂಗಾತಿ'ಯ ಬಳಗ, ಕೊಡಗು ಮತ್ತು ದಕ್ಷಿಣಕನ್ನಡ ಮಹಿಳಾ ಒಕ್ಕೂಟದಸದಸ್ಯರು ಭಾಗವಹಿಸಿದ್ದ ಸಮಾ ರಂಭದಲ್ಲಿ ನೆಯ್ಯಣೀರ ಕುಶಾಲಪ್ಪರವರು ಧ್ವಜಾರೋಹಣವನ್ನು ನೆರವೇರಿಸಿದರು. ಪ್ರೊ|| ಸಿ.ಬಿ. ರಾಮಚಂದ್ರರವರು ರಾಷ್ಟ್ರದ ಸ್ವಾತಂತ್ರ್ಯದ ಹತ್ತು ಹಲವು ಕನಸು ಗಳನ್ನು ಹೊತ್ತು ಹೋರಾಡಿದ ಮಹ ನೀಯರ ಸೇವೆಯನ್ನು ಸ್ಮರಿಸಿದರು. ಸ್ವಾಮಿ ವಿವೇಕಾನಂದ, ದಯಾನಂದ ಸರಸ್ವತಿ, ಶ್ರೀ ಅರವಿಂದರ ಸೈದ್ಧಾಂತಿಕ ಬೋಧನೆಗಳ ನೆಲೆಗಟ್ಟಿನಲ್ಲಿ ಲಜಪತರಾಯ್, ತಿಲಕ್, ಬಿಪಿನ್ ಚಂದ್ರಪಾಲ್, ವೀರ ಸಾವರ್ಕರ್, ಸುಭಾಶ್‌ಚಂದ್ರ ಬೋಸ್‌ರ 'ಬಲಿಷ್ಠರಾಷ್ಟ್ರ ವಾದ'ದ ಹಿನ್ನೆಲೆಯಲ್ಲಿ ಭಗತ್‌ಸಿಂಗ್, ಚಂದ್ರಶೇಖರ ಆಜಾದರ ತ್ಯಾಗ–ಬಲಿದಾನ ಗಳ, ಮಹಾತ್ಮ ಗಾಂಧೀಜಿಯವರ ಸತ್ಯಾ ಗ್ರಹ ಚಳುವಳಿಗಳ ವಿವಿಧ ಪ್ರಕಾರಗಳ ಸರಣಿಯಲ್ಲಿ ತಮ್ಮವರ ಪಾತ್ರವನ್ನು ಸ್ಮರಿಸಿ ದರು 1837ರ ಅಮರ ಸುಳ್ಯ ಸ್ವಾತಂತ್ರ್ಯ ಸಂಗ್ರಾಮದ ಸೇನಾ ನಾಯಕ, ಯೋಧ ಗುಡ್ಡೆಮನೆ ಶ್ರೀ ಅಪ್ಪಯ್ಯ ಗೌಡರೂ, ಕೆದಂಬಾಡಿ ಶ್ರೀ ರಾಮೇಗೌಡರ ಆತ್ಮಾರ್ಪಣೆ, ಗಾಂಧೀಜಿಯವರ ಕಾಯಿದೆ ಭಂಗ, ಕರ ನಿರಾಕರಣೆ, ವೈಯಕ್ತಿಕ ಸತ್ಯಾ ಗ್ರಹ 'ಕ್ವಿಟ್ ಇಂಡಿಯಾ' ಮೊದಲಾದ ಚಳುವಳಿಗಳಲ್ಲಿ ಭಾಗವಹಿಸಿದ ಗೌಡ ನಾಯಕರ ಸೇವೆ ಜನಾಂಗದ ಸಂಘಟನೆಗೆ ಸ್ಫೂರ್ತಿ ನೀಡಲೆಂದು ಹಾರೈಸಿದರು. ವೈಜ್ಞಾನಿಕ ಯುಗದಲ್ಲಿ ಭಾರತದ ಅಭಿ ವೃದ್ಧಿಗೆ ಸವಾಲಾಗಿರುವ ದುಷ್ಟ ಶಕ್ತಿಗಳ ವಿರುದ್ಧ ಹೋರಾಡುವಲ್ಲಿ ಯುವ ಜನಾಂ ಗದ ಕರ್ತವ್ಯವನ್ನು ಮಹಿಳಾ ಒಕ್ಕೂಟದ ಅಧ್ಯಕ್ಷೆ ಶ್ರೀಮತಿ ಕುಂಭಗೌಡನ ಮುತ್ತಮ್ಮನವರು ಮತ್ತು ವಿದ್ಯಾರ್ಥಿ ನಿಲಯದ ಶ್ರೀ ನಾಗೇಶ್‌ರವರು ವಿವರಿಸಿದರು.

## ವೈಜ್ಞಾನಿಕ ಸಾಧನ ಮತ್ತು ಸಲಕರಣೆಗಳು

| | | |
|---|---|---|
| ಮೈಕ್ರೋಮೀಟರ್ | : | ಸೂಕ್ಷ್ಮಾಂತರ ಮಾಪಕ |
| ಸ್ಟೆತಾಸ್ಕೋಪ್ | : | ವೈದ್ಯಕೀಯದಲ್ಲಿ ಬಳಸುವ ಹೃದಯ ಮತ್ತು ಶ್ವಾಸಕೋಶ ವಿಶ್ಲೇಷಕ |
| ಮೈಕ್ರೋಸ್ಕೋಪ್ | : | ಸೂಕ್ಷ್ಮದರ್ಶಕ |
| ವೋಲ್ಟಾಮೀಟರ್ | : | ವಿದ್ಯುತ್ ಒತ್ತಡ ಮಾಪಕ |
| ರೈನ್‌ಗೇಜ್ | : | ವರ್ಷ [ಮಳೆ] ಮಾಪಕ |
| ಫೋಟೋಮೀಟರ್ | : | ದ್ಯುತಿ [ಬೆಳಕು] ಮಾಪಕ |
| ಕ್ಯಾಲೋರಿ ಮೀಟರ್ | : | ಉಷ್ಣತಾಮಾಪಿ |
| ಬಾರೋಮೀಟರ್ | : | ವಾತಾವರಣದ ಒತ್ತಡ ಮಾಪಕ |
| ಗ್ಯಾಲ್ವೋನಾ ಮೀಟರ್ | : | ವಿದ್ಯುತ್ಪ್ರವಾಹ ಮಾಪಕ |

ಸಂಗ್ರಹ : ಕೋಳಿಮಾಡು ಪಿ. ಭವಾನಿ, ವೀರಾಜಪೇಟೆ.

# ಗೌಡ ಕೇಸರಿ ನಿಡ್ಯಮಲೆ ಮುದ್ದಪ್ಪನವರ ಜೀವನ ಚರಿತ್ರೆ ಭಾಗ-5

**ನಾ**ನು ಮೊತ್ತಮೊದಲು ಜಡ್ಜ್ ಮುದ್ದಪ್ಪನವರನ್ನು ಕಂಡದ್ದು ನಮ್ಮ ಊರಿಗೆ ವಿದ್ಯಾಸಂಘದ ಮಹಾ ಸಭೆಗೆ ಅಧ್ಯಕ್ಷರಾಗಿ ಬಂದಾಗ,

ಕುಳ್ಳ ವ್ಯಕ್ತಿ, ಗಂಭೀರವಾಗಿ ಧರಿಸಿದ ಆಂಗ್ಲ ಕೋಟು, ಟೈ, ಸಣ್ಣದಾಗಿ ಬಿಟ್ಟಿರುವ ಬಿಳಿ ಕೂದಲಿನ ಬರಿ ತಲೆ, ಚುರುಕು ಮಾತು. ಇವರು ಕೊಡಗಿನ ವಿರಾಜಪೇಟೆಯಲ್ಲಿ ಮುನ್ಸಿಫ್ ಆಗಿದ್ದರು. ಆಗ ನಡೆದ ಘಟನೆ, ಹಿಂದೆ ಕೊಡಗಿನ ವಿಪರೀತ ಮಳೆ. ಪ್ರತಿಯೊಬ್ಬನಿಗೆ ಕೊಡೆ ಅವಶ್ಯ. ಮುದ್ದಪ್ಪನವರು ಯಾವ ಕೆಲಸಕ್ಕೂ ಸಮಯಕ್ಕೂ ಸರಿಯಾಗಿ ತಲುಪುವುದು ಅವರ

ಲೇಖಕ : **ಪೂಜಾರಿ ಪೂವಯ್ಯ**

ಕ್ರಮ. ಒಂದು ದಿನ ಮುದ್ದಪ್ಪನವರು ಸುರಿ ಮಳೆಯಲ್ಲಿಯೇ ಕೊಡೆ ಹಿಡಿದುಕೊಂಡು ವಿರಾಜಪೇಟೆಯ ಕೋರ್ಟು ಮೆಟ್ಟಿಲನ್ನು ಹತ್ತಿದರು. ಕೊಡೆ ಮಡಿಚಿದ ಕೂಡಲೆ ತನ್ನ ಕೈಯಿಂದ ಕೊಡೆ ತೆಗೆದುಕೊಳ್ಳಲು ಅಲ್ಲಿ ಕಾದಿರಬೇಕಾಗಿದ್ದ ಜವಾನ ಇತ್ತಿಲ್ಲ ಮುದ್ದಪ್ಪನವರು ಅವರ ಸ್ಥಾನದಲ್ಲಿ ಹೋಗಿ ಕುಳಿತು ಕೊಡೆ ತೆಗೆದುಕೊಳ್ಳಲು ತಡವಾಗಿ ಬಂದ ಜವಾನನ್ನು ಸಸ್ಪೆಂಡ್ ಮಾಡಿದರು. ಕಾರಣ ತಡವಾಗಿ ಬಂದದಕ್ಕೆ. ತಡವಾಗಿ ಬರಲು ಮಾಡಿದ್ದು ಅಲ್ಲಿಯ ಕೆಲವು ಕುತಂತ್ರದ ಜನರು. ಈ ವಿಷಯ ಮುದ್ದಪ್ಪನವರಿಗೆ ಮೊದಲೇ ಸೂಕ್ಷ್ಮ ಸಿಕ್ಕಿತ್ತು. ಇದರಿಂದ ಅವರ ಚುರುಕು ಬುದ್ಧಿಯ ಅರಿವಾಗುತ್ತೆ. ಇವರು ವಿರಾಜಪೇಟೆಗೆ ಹೋದ ನಂತರ ತುಂಬಾ ಹಿಂದೆ ಬಿದ್ದಿದ್ದ ಕೇಸುಗಳನ್ನು ಪರಿಶೀಲಿಸಿ ಸಮಯ ಕಳೆಯದೆ ಕೂಡಲೆ ಅವುಗಳಿಗೆ ತೀರ್ಪು ಕೊಡುತ್ತಿದ್ದರು. ಇವರ ಚಾತುರ್ಯವನ್ನು ನಂತರ ಜನರು ಕೊಂಡಾಡಿದರು.

### ಇನ್ನೊಂದು ಘಟನೆ

ಮುದ್ದಪ್ಪನವರು ಒಂದು ದಿನ ಬೆಳಗ್ಗೆ ಎಂಟು ಘಂಟೆಗೆ ಮಡಿಕೇರಿಯ ಗೌಡ ಹಾಸ್ಟೆಲ್‌ಗೆ ಯಾರಿಗೂ ತಿಳಿಯದಂತೆ ಬಂದರು. ಎಂಟು ಗಂಟೆಯಾದರೂ ಕೆಲವು ವಿದ್ಯಾರ್ಥಿಗಳು ಹಾಸಿಗೆಯಿಂದ ಎದ್ದೇಳಲಿಲ್ಲ. ಕೆಲವರು ಆ ಸಮಯದಲ್ಲಿ ಹರಟೆ ಮಾತಿನಲ್ಲಿದ್ದರು. "ಎಲ್ಲಿ ಈ ಮಕ್ಕಳು" ಎಂದು ಹಾಸ್ಟೆಲ್ ಮೇನೇಜರನ್ನು ಗರ್ಜಿಸಿ ಕೇಳಿದರು. ಮಕ್ಕಳು ಕೂಡಲೇ ಬರಲಿಲ್ಲ. ತಿರುಗಿ ಕೇಳಿದಾಗ ಸಾರ್ ಅವರು ತಲೆ ಬಾಚಿ ಬರುತ್ತಾರೆಂದರು. ಅವರನ್ನು ನೋಡಿದರೆ ಭಯ ಮತ್ತು ಧೈರ್ಯವಿಲ್ಲದ ಆಗಿನ ಮಕ್ಕಳಿಗೆ. ಇದರಿಂದ ಮಕ್ಕಳ ವಿದ್ಯಾಭ್ಯಾಸದ ವಿಚಾರದಲ್ಲಿ ಅವರಿಗಿದ್ದ ನಿಷ್ಠೆ ಅರಿವಾಗುತ್ತೆ.

ಇನ್ನೊಂದು ಸಂದರ್ಭದಲ್ಲಿ ಗೌಡರ ಮಕ್ಕಳಿಗೆ ಸರ್ಕಾರಿ ಹುದ್ದೆ ಕೊಡುವ ಬಗ್ಗೆ ಆಗಿನ ಹಿರಿಯ ಸರ್ಕಾರಿ ಅಧಿಕಾರಿಗೆ ಹೇಳಿದರು. "ನೋಡ್ರಿ ಇವನು ಗೌಡ, ಇವನನ್ನು ಸೇರಿಸಿ" ಎಂದು ಗಡುಸಿನಿಂದ ಹೇಳುತ್ತಿದ್ದರು. ನನ್ನ ಸ್ವಂತ ಒಂದು ಘಟನೆಯನ್ನು ಹೇಳುವುದಾದರೆ 1952ರಲ್ಲಿ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಕೂತು ನಾನು ತೇರ್ಗಡೆಯಾಗಲಿಲ್ಲ. ನಿರಾಶನಾಗಿ ಓದುಗಾರಿಕೆ ಮುಂದುವರಿಸಲು ಇಷ್ಟ ಪಡಲಿಲ್ಲ. ಉದ್ಯೋಗಕ್ಕಾಗಿ ಮುದ್ದಪ್ಪನವರನ್ನು ಭೇಟಿ ಮಾಡಿದೆನು. ಮರು ದಿನ ಮಧ್ಯಾಹ್ನ ಎರಡು ಘಂಟೆಗೆ ಅವರ ಕಛೇರಿಯ ಚೇಂಬರ್‌ಗೆ ಬರ ಹೇಳಿದರು. ಸಮಯಕ್ಕೆ ಸರಿಯಾಗಿ ಹೋದೆನು. ಚೇಂಬರಿನ ಒಳಗಡೆ ಅವರ ಜೊತೆಗೆ ಯಾರೋ ಮಾತನಾಡುತ್ತಿದ್ದರು. ಅವರ ಮಾತು ಮುಗಿಯಲೆಂದು ನಾನು ಕಾದೆನು. ಸುಮಾರು ಸಂಜೆ 5 ಗಂಟೆಗೆ ಅವರ ಮಾತು ಮುಗಿದು ಅಲ್ಲಿಗೆ ಬಂದ ವ್ಯಕ್ತಿ ಹೊರಟು ಹೋದರು. ನಾನು ಒಳಗೆ ಹೋದೆನು "ಏನಣ್ಣಾ ಇಷ್ಟು ಹೊತ್ತಿಗೆ ಬಂದಿಯೊ" ಎಂದು ಕೇಳಿದರು ''ಸರ್ ನಾನು ಸಮಯಕ್ಕೆ ಸರಿಯಾಗಿ ಬಂದೆನು. ನಿಮ್ಮ ಚೇಂಬರಿನಲ್ಲಿ ಯಾರೋ ಮಾತನಾಡುತ್ತಿದ್ದ ಕಾರಣ ಅವರ ಮಾತು ಮುಗಿಯುವವರೆಗೂ ನಾನು ಒಳಗೆ ಬರಲಿಲ್ಲ'' ಎಂದೆನು. 'ನಾವು ಏನೋ ಮಾತನಾಡುತ್ತಿದ್ದೆವು ನೀನು ಬಾಗಿಲು ತಟ್ಟಿ ಒಳಗೆ ಬರಬೇಕಿತ್ತು. ನಿನ್ನ ಸಮಯ ಹಾಳು ಮಾಡಬಾರದು' ಎಂದು ನಗು ಮುಖದಿಂದ ಹೇಳಿದರು. ಈ ಮಾತನ್ನು ಮನಸ್ಸಿನಲ್ಲಿಟ್ಟುಕೊಂಡು ಇಂದಿಗೂ ನಾನು ಅನುಸರಿಸುತ್ತಿರುವೆನು. ಈ ರೀತಿಯಲ್ಲಿ ಅನೇಕ ನಿದರ್ಶನಗಳನ್ನು ಬರೆಯುತ್ತಾ ಹೋಗಬಹುದು. ಆದರೆ ನಾನು ಸ್ವಂತ ಕಂಡು ಮತ್ತು ಕೇಳಿದ ವಿಚಾರಗಳ ಆಧಾರದ ಮೇಲೆ ಅವರಲ್ಲೂ ಕೆಲವೊಂದು ನಿದರ್ಶನಗಳನ್ನು ಮಾತ್ರ ಇಲ್ಲಿ ಮೂಡಿಸಿದ್ದೇನೆ. ಶ್ರೀಮಾನ್ ದಿವಂಗತ ನಿಡ್ಯಮಲೆ ಮುದ್ದಪ್ಪನವರ ದಿವ್ಯ ಜೀವನದ ಕೆಲವೊಂದು ಧ್ಯೇಯಗಳನ್ನಾದರೂ ಇಂದಿನ ಯುವಕರೂ ಮತ್ತು ಯುವತಿಯರು ತಿಳಿದುಕೊಂಡು ಅದನ್ನು ಆಚರಿಸಲಿ ಎಂಬ ಉದ್ದೇಶದಿಂದ ಈ ಚಿಕ್ಕ ಲೇಖನವನ್ನು ಬರೆದು ಇಲ್ಲಿಗೆ ಮುಗಿಸಿ ದಿ॥ ಮುದ್ದಪ್ಪನವರ ಹೆಸರು ಅಮರವಾಗಲಿ ಎಂದು ಹಾರೈಸುತ್ತೇನೆ.

[ಮುಂದುವರಿಯುವುದು]

### ತಿದ್ದುಪಡಿ

ಹಿಂದಿನ ಸಂಚಿಕೆಯ 12ನೇ ಪುಟದಲ್ಲ ನೀಡ್ಯಮಲೆ ಮುದ್ದಪ್ಪನವರ ಜೀವನ ಚರಿತ್ರೆ ಎಂಬ ಲೇಖನದಲ್ಲಿ ಶ್ರೀಮತಿ ದೇವಮ್ಮನವರು [1045]ನೇ ಇಸವಿಯಲ್ಲಿ ನಿಧನರಾದರು ಎಂದು ತಪ್ಪಾಗಿ ಪ್ರಕಟವಾಗಿದೆ. ಓದುಗರು ಅದನ್ನು 1945ರಲ್ಲಿ ಎಂದು ತಿದ್ದಿ ಓದಿಕೊಳ್ಳಬೇಕಾಗಿ ಪ್ರಾರ್ಥನೆ. —ಸಂ

**ಭಾ**ರತದಲ್ಲಿ ವಲಸೆಯ ರೂಢಿ ಸನಾತನವಾದದ್ದು. ಹವಮಾನ, ಪ್ರಕೃತಿ ಕೋಪ, ಹೊಟ್ಟೆಗೆ ಹಿಟ್ಟಿನ ಚಿಂತೆ ಹೀಗೆ ಹಲವಾರು ಕಾರಣಗಳಿಂದ ಜನರು ಪುರಾತನ ಕಾಲದಿಂದಲೇ ವಲಸೆ ಹೋಗುತ್ತಿದ್ದರು. ಹಾಗೆಯೆ ಕೊಡಗಿನಲ್ಲಿಯೂ ಸ್ಥಳೀಯರು, ವಲಸೆಗಾರರೆಂಬುದು ಒಂದಾನೊಂದು ಕಾಲಕ್ಕೆ ಸರಿಹೋಗಿದೆ. ಅದನ್ನು ಅಲ್ಲಗಳೆಯಲಾಗದು. ಈ ಬರಹ ಕೊಡಗಿನ ಕೊಡವರಿಗೂ, ಅರೆಭಾಷೆ ಗೌಡರಿಗೂ ಸಂಬಂಧಿಸಿದ್ದು, ಕೆಲವು ಪತ್ರಿಕೆಗಳಲ್ಲಿ ಗೌಡರು ಒಲಸೆಗಾರರಲ್ಲ ಎಂಬುದಾಗಿ ಬರೆದರು. ಹಾಗಾದರೆ ಕೊಡವರಿಗಿಂತ ಹಿಂದೆ ಇದ್ದವರೇ ?

ಈಗ ಏಕೆ ಈ ಪ್ರಶ್ನೆ ಉದ್ಭವಿಸಿತು ? ವಲಸೆಗಾರರು ಯಾರು ? ಹೊಟ್ಟೆಪಾಡಿಗಾಗಿ ವೃತ್ತಿ, ಆಹಾರವನ್ನು ಹುಡುಕಿಕೊಂಡು ಅಲೆದಾಡುವವರು ವಲಸೆಗಾರರು. ಕೆಲವು ಕಡೆ ಅವರು ನೆಲೆ ನಿಲ್ಲುವರು. ಕೆಲವು ಕಡೆ ವಲಸೆ ಹೋಗುವುದನ್ನು ಕಸುಬಾಗಿ ಮಾಡಿಕೊಳ್ಳುವರು. ಕೊಡಗಿನ ಅಂದಿನ ಪರಿಸ್ಥಿತಿಯನ್ನು ಇಣಕಿನೋಡುವ. 1785ರಲ್ಲಿ ಮುಸಲ್ಮಾನರ [ಹೈದರಾಲಿ, ಟಿಪ್ಪು] ಧಾಳಿಯಿಂದ ಕೊಡವರ ಸಂಖ್ಯೆ ಕಡಿಮೆಯಾಯಿತು. ಫಲವತ್ತಾದ ಜಮೀನು ಪಾಳುಬೀಳುವ ಪರಿಸ್ಥಿತಿ ಬಂತು. ವೀರರಾಜರಿಗೆ ಪ್ರಜೆಗಳ ಸಂಖ್ಯೆ ಅತೀ ಕಡಿಮೆಯಾಯಿತು. ಅಂಥ ಸಮಯದಲ್ಲಿ ಈಗಿನ ದಕ್ಷಿಣ ಕನ್ನಡದ ವ್ಯವಸಾಯಗಾರರನ್ನು ಆಮಂತ್ರಿಸಿದರು ಆ ಆಮಂತ್ರಣವನ್ನು ಸ್ವೀಕರಿಸಿ ಬಂದವರು ಇಂದಿನ ಅರೆಭಾಷೆ ಗೌಡರು. ಇವರು ವಲಸೆ ಬರಲಿಲ್ಲ. ವಲಸೆಗಾರರಲ್ಲ. ಆಮಂತ್ರಣದಲ್ಲಿ ಬಂದವರು.

ಇಲ್ಲಿಗೆ ಬಂದು ಇಲ್ಲಿಯ ಫಲವತ್ತಾದ ಜಮೀನನ್ನು ಸಾಗುಗೊಳಿಸಿ, ವೀರರಾಜನ ಪ್ರಜೆಗಳಾದವರು. ನಮ್ಮ ಆಮಂತ್ರಣದ ಬಂಧುಗಳು ಇವರಿಗೆ ಜಮೀನಿದೆ, ಕೋವಿ ಇದೆ. ಅಂದಿನ ರಾಜ ಪೋಷಕವಾದ ಕುಪ್ಪಸ, ದಟ್ಟಿ, ಪೀಚೆಕತ್ತಿ, ಮಂಡೆತುಣಿಯಲ್ಲಿ ಮೆರೆದು, ಸ್ಥಳೀಯರೊಂದಿಗೆ ಬೆರೆತು ಸ್ಥಳೀಯ ಹಬ್ಬಗಳಾದ ಬಿಸು, ಕೈಲ್ ಪೊಳ್ದ್, ಕಾವೇರಿ ಚಂಗ್ರಾಂದಿ, ಹುತ್ತರಿಗಳನ್ನೆಲ್ಲ ಸದಾ ಆಚರಿಸಿ, ಕೊಡಗಿನಲ್ಲಿ ಕೊಡವರಾಗಿ, ಕೊಡವರೊಟ್ಟಿಗೆ ಕಲೆತು, ಬೆರೆತು ಬಾಳಿದ ವಂಶ. ಭಾಷೆ, ಪದ್ಧತಿಗಳಲ್ಲಿ, ಸ್ತ್ರೀಯರ ಉಡುಪಿನಲ್ಲಿ ಬದಲಾವಣೆ ಕಂಡರೂ ಕೊಡಗಿನ ಸಂಸ್ಕೃತಿ, ಸಂಪ್ರದಾಯದವರು. ಕೊಡವರಿಲ್ಲದೆ ಇವರು ಬದುಕಲಾರರು. ಗೌಡರಿಲ್ಲದೆ ಕೊಡವರು ಬದುಕಲಾರರು. ಕೊಡವರು, ಗೌಡರು ಕೊಡಗಿನ ನಾಣ್ಯದ 2ಮುಖಗಳು. ಇಷ್ಟು ವರುಷ ಸಹಬಾಳ್ವೆಯಲ್ಲಿ ಬೆಳೆದಿರುವವರು ಈಗ ಏಕೆ ವೈಷಮ್ಯ ಕಾರುತ್ತಿರುವುದು ?

ಕಾರಣ ಇಷ್ಟೆ. ಹಿರಿಯರು, ಅನುಭವಿಗಳು, ರಾಜಕಾರಣಿಗಳು, ಬುದ್ಧಿಜೀವಿಗಳೆಂದು ಹೇಳಿಕೊಳ್ಳುವವರು ತಮ್ಮ ಸ್ವಾರ್ಥಕ್ಕಾಗಿ ಜನರನ್ನು ಬಲಿಪಶುಗಳಾಗಿ ಮಾಡುತ್ತಿದ್ದಾರೆ. ಕೆಲವು ಪತ್ರಿಕೆಗಳೂ ಇದನ್ನು ಪ್ರಚೋದಿಸುತ್ತದೆ. ವ್ಯಾಜ್ಯ, ಜಗಳ ವೈಶಮ್ಯಗಳಿಂದ ಕಟ್ಟಿದ ರಾಜ್ಯ ಉನ್ನತಿಯಾಗಿಲ್ಲ. 2 ಮಹಾಯುದ್ಧಗಳು ಕಳೆದವು. ಶಾಂತಿ ನೆಮ್ಮದಿ ಸಿಗಲಿಲ್ಲ, ಶಾಂತಿ ಪ್ರೀತಿಗಾಗಿ ಹಂಬಲಿಸಬೇಕು. ಪ್ರೀತಿ, ಸಹಬಾಳ್ವೆ, ಸಹನೆ, ಸಲಗೆ ಇವೇ ನಮ್ಮೀ ಜೀವಾಳ.

ಇನ್ನಾದರೂ ಜನಾಂಗದ ಹಿರಿಯರು ಕಿರಿಯರಿಗೆ ಒಳ್ಳೇ ಮಾರ್ಗದರ್ಶನ ನೀಡಲಿ. ಬೇರ್ಪಡಿಸುವ, ಪ್ರಚೋದಿಸುವ ಮಾತುಗಳಿಗೆ ಕಡಿವಾಣ ಹಾಕಲಿ. ಒಂದಾಗಿ ಹೊಂದಾಣಿಕೆಯಿಂದ ಬದುಕಿ ಬಾಳುವುದನ್ನು, ಪ್ರೀತಿ ವಿಶ್ವಾಸವನ್ನು ಮೂಡಿಸಲಿ ಜನಾಂಗ, ಜನಾಂಗದ ಬೇರ್ಪಡೆ ಬೇಡ, ಸೇರ್ಪಡೆ ಬೇಕು. ನನ್ನ ಒಂದೇ ಒಂದು ಆಸೆ ಕೊಡವ, ಗೌಡ ಜನಾಂಗ ಒಂದಾಗಿ ಒಮ್ಮತ, ಒಗ್ಗಟ್ಟಿನಿಂದ ಬಾಳುವುದನ್ನು ನೋಡಿ ಸತ್ತರೆ, ಅದೇ ನನಗೆ ವೀರ ಮರಣ. ಪತ್ರಿಕೆಗಳು ಈ ನಿಟ್ಟಿನಲ್ಲಿ ಮಹಾಪಾತ್ರ ವಹಿಸಲಿ.

**ಚೇಂದ್ರಿಮಾಡ ಗ. ಮುತ್ತಪ್ಪ**
ಕುಶಾಲನಗರ

**ವಿ. ಸೂ. :** [ಈ ಮೇಲಿನ ಟಿಪ್ಪಣಿಗಳಿಗೆ ಸುಳ್ಯ, ಪುತ್ತೂರು, ಸೀಮೆಯಿಂದ ಮಾತ್ರವಲ್ಲ, ಐಗೂರು ಸೀಮೆಯಿಂದಲೂ ಜನರನ್ನು ಕೊಡಗಿನ ರಾಜ ಆಮಂತ್ರಿಸಿದ್ದಾನೆ. ಅಂದಿನ ರಾಜರ ಆಳ್ವಿಕೆಯ ವಿಶಾಲ ಕೊಡಗು [Greater Coorg], ಪಶ್ಚಿಮಕ್ಕೆ ಸುಳ್ಯ, ಪುತ್ತೂರು, ಸುಬ್ರಮಣ್ಯ, ಪಾಣಿ ಮಂಗಳೂರಿನ ತನಕವೂ, ಪೂರ್ವಕ್ಕೆ ಪೆರಿಯಪಟ್ಟಣವು, ಉತ್ತರಕ್ಕೆ ಅರಕಲಗೂಡು, ಸಕಲೇಶಪುರ ಸೀಮೆಯನ್ನು ಮಂಜರಾಬಾದ್, ಐಗೂರು ಸೀಮೆಯನ್ನು ಸಹ ಒಳಗೊಂಡಿತ್ತು. 1834ರಲ್ಲಿ ಕೊಡಗಿಗೆ ಬ್ರಿಟಿಷರ ಆಗಮನದಿಂದಾಗಿ ಅವರ ಕುತಂತ್ರದಿಂದ ಜನಾಂಗವನ್ನು ಒಡೆದು ಆಳುವ ನೀತಿಯಿಂದ, ಕೊಡಗು ಈಗಿನ 3 ತಾಲ್ಲೂಕುಗಳಿಗೆ ಸೀಮಿತವಾಗಿರುವುದು ಕೊಡಗು ನಾಡಿನ ದುರ್ದೈವವೆಂದು ತಿಳಿಸಲು ಸಂಗಾತಿ ಇಚ್ಛಿಸುತ್ತದೆ. —ಸಂಪಾದಕಿ]

## ಹವ್ಯಾಸ

ಇಲ್ಲೊಬ್ಬ ಮಲಗಿದ್ದಾನೆ ಭಾರೀ ಕಂಜೂಸ
ಯಾರಿಗೂ ಕೊಡಲಿಲ್ಲ ಒಂದು ಕಾಸ
ಈಗೀತನಿಗೇನು ಗತಿ? ಎಷ್ಟು ತ್ರಾಸ ?
ಯಾರಿಗೂ ಬೇಡ ಇವನ ಹವ್ಯಾಸ ?

—**ಪವನ್**, ಮೈಸೂರು.

## ಸಂಗಾತಿ ಪದಬಂಧ-3

| | | | | | | | | | | |
|---|---|---|---|---|---|---|---|---|---|---|
| 1 | | | | 2 | ■ | 3 | | | | 4 |
| | ■ | ■ | ■ | | ■ | | ■ | ■ | ■ | |
| 5 | | | 6 | | ■ | 7 | 8 | | | |
| ■ | ■ | ■ | | ■ | ■ | ■ | | ■ | ■ | ■ |
| 9 | | | | ■ | 10 | ■ | 11 | | | 12 |
| | ■ | ■ | | ■ | | ■ | | ■ | ■ | |
| | ■ | ■ | 13 | | | | | ■ | ■ | |
| ■ | ■ | ■ | | ■ | ■ | ■ | | ■ | ■ | ■ |
| 14 | | | | 15 | ■ | 16 | | | | 17 |
| | ■ | ■ | ■ | | ■ | | ■ | ■ | ■ | |
| 18 | | | | | ■ | 19 | | | | |

### ಎಡದಿಂದ ಬಲಕ್ಕೆ

1 ಐದಕ್ಷರದ ಗಣಪ-5
3 ಸಂಕಟದಲ್ಲಿರುವವರಿಗೆ ತೋರಿಸಿದ ಅನುಕಂಪ-5
5 ಇದು ಹೊಸ ಮನೆ-5
7 ಒಳ್ಳೆಯತನದ ಸೋಗಿನಲ್ಲಿ ಮೋಸ ಮಾಡುವವನು-5
9 ನಾಲ್ಕಕ್ಷರದ ಬಳಿಯುವಿಕೆ-4
11 ಯಾವಾಗಲೂ ಎಂಬರ್ಥ ನೀಡುವ ಪದ-4
13 ಕಡಲಿನ ದಡ-5
14 ಆಂಗ್ಲರ ಆ್ಯಕ್ಟ್ ಇಲ್ಲಿ ಕನ್ನಡಕ್ಕೆ ಬಂದಿದೆ-5
16 ಅವನು ವಿದ್ಯೆಯಿಲ್ಲದವನು-5
18 ಏರುಪೇರಿಲ್ಲದ ಸ್ಥಿತಿ-5
19 ದೊಡ್ಡಸ್ಥಿಕೆಯಿಲ್ಲದೆ ಮಾಡಿದ ಯಜ್ಞವನ್ನು ಹೀಗೆನ್ನೋಣವೇ ?-5

ರಚನೆ : **ಬೈತಡ್ಕ ಕೆ. ಶ್ರೀಧರ,** ಪುತ್ತೂರು

### ಮೇಲಿನಿಂದ ಕೆಳಕ್ಕೆ

1 ಮೂರಕ್ಷರದ ಆಕಾಶ-3
2 ನಳನು ಮಾಡಿದ ವಂದನೆ-3
3 ಸರ್ವರೂ ಒಂದೇ ರೀತಿಯಲ್ಲಿದ್ದಾರಲ್ಲ-3
4 ತಿರುಪತಿಯಲ್ಲಿ ಕಂಡ ಭಿಕ್ಷುಕ-3
6 ಭೇಟಿಯಾಗುವ ಹೊತ್ತು ಎಂಬುದನ್ನು ಹೀಗೆ ಹೇಳಬಹುದಲ್ಲ-7
8 ಕೆಳಗಿನಿಂದ ಮೇಲೇರಿರುವ ವಿಷಯಗಳ ಅದಲು-ಬದಲು-7
9 ವಿಮಲಳು ನೋಡಿದ ಆಶ್ಚರ್ಯಕರ ಸಂಗತಿ-3
10 ದಕ್ಷಿಣೆ ಬೇಡುತ್ತಿರುವ ಬಡವ-3
12 ರಂಗನನ್ನು ಸಮಾಧಾನಪಡಿಸು-3
14 ಅವರ ಬಟ್ಟೆಯನ್ನು ಒಗೆಯುತ್ತಿರುವವನಾರು-3
15 ಮನಸ್ಸಿನಲ್ಲಿ ಚಿಂತಿಸುವಿಕೆ-3
16 ಸರಸವಾಡುತ್ತಿರುವ ದೊರೆ-3
17 ತಮ್ಮ ನೋಡಿದ ನೀರಿನ ಅಲೆ-3

## ಪದಬಂಧ-2ರ ಉತ್ತರ

### ಎಡದಿಂದ ಬಲಕ್ಕೆ

2 ಶವಪರೀಕ್ಷೆ
4 ಗಿಣ್ಣು
5 ದೂರ
6 ಮೋಡ
7 ಪಿಸ್ಟನ್
8 ರಕ್ತ
9 ಶ್ರಮ
11 ಜೇನು
13 ಕಬ್ಬಿಣ
14 ಸ್ವಾಭಿಮಾನ

### ಮೇಲಿನಿಂದ ಕೆಳಕ್ಕೆ

1 ತೆಂಗಿನ ಮರ
2 ಶರ್ಕರ ಪಿಷ್ಟ
3 ಪಕ್ಷಿ
10 ಮಧ್ಯಪಾನ
12 ಗುಬ್ಬಿ

○

# ಗೌಡರ ವಿವಾಹ ಪದ್ಧತಿಯ ಶೋಬಾನೆಗಳು

## 5. ಅಕ್ಕನ ಕರೆಯುವ ಹಾಡು : [ಉಳಿದ ಭಾಗ]

ಶಿಸುಬಾಲೆ ಬಾನ ತಕ್ಕೊಂಡು ಹೊರಟಾಳು ಅಕ್ಕಯ್ಯ ಅರಮನೆಗೇನೆ ನಡೆದಾಳು ॥ ಎದುರಿಗೆ ಹಾಲು ನೀರೂ, ಯಾರುವೆ ತರಾಲಿಲ್ಲ । ಜನವಿಲ್ಲದವಳು ಈಗೇತಕೆ ಬಂದಿದ್ದಿನಿ ಮಗಳೆಡೆ । ಕಡೆಕಣ್ಣ ಕೋಡಿ ದುಃಖ ಬಿಟ್ಟಾಳು ಹಿರಿಯಕ್ಕಾ। ಎಲೆ ತಮ್ಮ ನೀ ಕೇಳು । ಎಲೆ ತಮ್ಮ ನೀ ಕೇಳು । ಗೆಜ್ಜೆ ಕಾಲು ಕುವರನು । ಸುಂಟಿಯ ಸುಳಿಯ್ಹಾಗೆ ಬಳಕೂತ್ತ । ಹಾಗಾಗಿ ಬಂದೆ ಎಲೆ ತಮ್ಮ। ಕಳಸ ಕನ್ನಡಿ ಹಿಡಿಯಲಿಕೆ ಕೊಡಿ ನನಗೆ ॥ ೯ ॥ ಅದುವೇನೂ ಆಗೋದಿಲ್ಲ ಎಲೆಯಕ್ಕ ಒಂದು ವೀಳ್ಯವ ಕೊಡುವಲ್ಲಿಂದ ಎರಡು ವೀಳ್ಯವ ಕೊಟ್ಟು ನೆರೆಮನೆಯಕ್ಕಂದಿರಿಗೆ ಕಳಸ ಕನ್ನಡಿ ಹಿಡಿಯಲಿಕ್ಕೆ ಕೊಟ್ಟಿದ್ದೇವೆ ॥ ಅದೇನು ಆಗಲಿಕ್ಕಿಲ್ಲ ಎಲೆ ತಮ್ಮ। ನನಗಾದ್ರೆ ಕಳಸ ಕನ್ನಡಿ ಹಿಡಿಯಲಿಕ್ಕ ಕೊಡಾಬೇಕು ॥ ಒಂದು ವೀಳ್ಯವ ಕೊಡುವಲ್ಲಿಂದ ಅಕ್ಕಯ್ಯಾ ಎರಡು ವೀಳ್ಯವ ಕೊಟ್ಟು । ನೀನವರ ಪಾದಕ್ಕೆರಗಿ ಸರಣಾವ ಮಾಡಿ ಬೇಕಾದ್ರೆ ಬೇಡಿಕೋ ॥ ಒಂದು ವೀಳ್ಯವ ಕೊಡುವಲ್ಲಿಂದ ಎರಡೂ ವೀಳ್ಯವನ್ನೀಗ । ಕೊಟ್ಟಾಳು ಅಕ್ಕಯ್ಯ ಕೊಟ್ಟು ಸರಣಾವ ಮಾಡಿದಾಳು ॥೧೦॥ ಕೊಡಲಿಕ್ಕೆ ಹಿಡಿದ ಕಳಸ ಕನ್ನಡಿಯಿದುವಲ್ಲ । ಹೋಗಕ್ಕ ನಾನೀಗ ಕೊಡೋದಿಲ್ಲ ಕಡೆ ಕಣ್ಣ ಕೋಡಿ ದುಃಖ ಬಿಟ್ಟಾಳೀಗ। ಅಕ್ಕಯ್ಯ ತಾಯಿಯ ಹತ್ತಿರ ನಡೆದಾಳು ॥ ತಾಯವ್ವ ನೀವು ಕೇಳಿ ಎಲೆತಾಯವ್ವ ನೀವು ಕೇಳಿ ಕಳಸ ಕನ್ನಡಿ ಕೊಡಿ ನನಗೆ ॥ ಎಲೆಮಗಳೆ ನೀ-ಕೇಳು ಎಲೆ ಮಗಳೆ ನೀ ಕೇಳೂ । ಕಳಸ ಕನ್ನಡಿ ಕೊಡಿಸೋಕೆ ಆಗೋದಿಲ್ಲ ॥ ೧೧ ॥ ನಿನಗೆ ಐಶ್ವರ್ಯ ಸಿಕ್ಕಿತೆಂದು ಹೆಮ್ಮೆಯಲಿ ತಮ್ಮನ ಎಲ್ಲಿಗೂ ಕಾಣಲಿಲ್ಲ ॥ ನನ್ನಿಂದಾಗದ ಕೆಲಸವಿದೂ ಎಲೆ ಮಗಳೆ ನಿನ್ನ ತಂದೆ ಹತ್ತಿರ ಹೋಗಿ ಬೇಡಿಕೊಳ್ಳೀಗ ॥ ತಂದೆಪ್ಪನವರ ಪಾದ ಹಿಡಿದು ಸರಣಾವ ಮಾಡಿದಾಳು ಮಗಳು । ಕಡೆಕಣ್ಣ ಕೋಡಿ ದುಃಖ ಬಿಟ್ಟಾಳೀಗ ॥ ಬೇಸರವೇತಕೆ ಮಗಳೆ ಒಂದು ಗೊನೆಯಿಂದೀಗ । ಒಂದೂವಾ ಹಣ್ಣ ಹೋಯ್ತೆಂದು ಮನದಲ್ಲಿ ನಾವು ನೆನೆದೇವು ॥ ೧೨ ॥ ಅದೇನು ಆಗಲಿಕ್ಕಿಲ್ಲ ತಂದೆಯವರೆ ಕಳಸ ಕನ್ನಡಿ ಹಿಡಿಯಲಿಕ್ಕೆ ಕೊಡಿಸಾಬೇಕು॥ ಹರಿವಾಣ ತುಂಬ ವೀಳ್ಯವ ತೆಗೆದುಕೊ ನೀನು॥ ನೆರೆಮನೆಯ ಅಕ್ಕಂದಿರಿಗೆ ಕೊಟ್ಟು ಅವರ ಕಾಲು ಹಿಡಿದು ಸರಣಾವ ಮಾಡಿ ಕಳಸ ಕನ್ನಡಿ ಬೇಡಿಕೊ ॥ ವೀಳ್ಯವನ್ನೀಗ ಕೊಟ್ಟು ಬೇಡಿದಾಳು ಅಕ್ಕಯ್ಯ ಕಳಸ ಕನ್ನಡಿ ಕೊಟ್ಟಾರೀಗ ॥ ೧೩ ॥ ಕಳಸ ಕನ್ನಡಿಯನ್ನೀಗ ಕೊಟ್ಟಾರು ನೆರೆಮನೆಯಕ್ಕಂದಿರು । ಕಳಸ ಕನ್ನಡಿ ಹಿಡಿದಾಳು ಹಿರಿಯಕ್ಕ ದಿಬ್ಬಣವನ್ನೆ ಹೊರಟಾರು ॥ ೧೪ ॥

## 6. ದಿಬ್ಬಣ ಹೊರಡಿಸುವ ಹಾಡು :

ಅರಮನೆ ಸಾರಿಸಿ ರಂಗೋಲೆ ಬರೆದಿರಿಸಿ। ಮಗನ ಶೃಂಗರಿಸಿ ಒಳಗಿಂದ ತಾಯವ್ವ । ಚಿನ್ನದ ಪೆಟ್ಟಿಗೆ ತೆಗೆದಿರಿಸಿ ॥ ಉಪ್ಪರಿಗೆ ಸಾರಿಸಿ ರಂಗೋಲೆ ಬರೆದಿರಿಸಿ । ಮಗನ ಶೃಂಗರಿಸಿ ಒಳಗಿಂದ ತಾಯವ್ವ । ಒಳಗಿಂದ ತಾಯವ್ವ ಹಣದ ಪೆಟ್ಟಿಗೆ ತೆಗೆದಿರಿಸಿ ಏಳೇಳು ಇಂದ್ರನೇ ಏಳೇಳು ಚಂದ್ರನೇ ಏಳೇಳು ಗಂಭೀಗರುಡನೆ। ಏಳೇಳೆಂದರೆ ಏಳುವವನು ನಾನಲ್ಲ। ಸೋದರ ಅತ್ತೇ ಮಾವಂದಿರು ಬರಾಬೇಕು. ॥ ೧ ॥ ಹಸೆ ಮೇಲಿಂದ ಒಂದು ಓಲೆ ಬರೆದಾನು ಅಣ್ಣಯ್ಯ । ಓಲೆ ಕಂಡಾಕ್ಷಣ ಬರಬೇಕು ಅತ್ತೆ ಮಾವನವರೇ । ಕೂತಲ್ಲಿಂದ ಒಂದು ಓಲೆ ಕಳೂಗಿದ ॥ ೨॥ ಓಲೆಯ ತೆಕ್ಕೊಂಡು ಹೋದಾರು ಅಣ್ಣಯ್ಯ ಸಣ್ಣಕ್ಕಿ ಬಯಲಲ್ಲಿ ನಡೆದಾರು । ದೂರದಿಂದಲಿ ಮಾವನವರು ಅಳಿಯ ಬರುವುದು ಕಂಡು । ಎಡ ಹಾದಿಯಲ್ಲಿ ಹೋಗುತ್ತಾರೋ। ಬಲಹಾದಿಯಲ್ಲಿ ಬರುತ್ತಾರೋ ನಮ್ಮ ರಾಮು ಅರಮನೆಗೆ ॥೩॥ ಬೆಳ್ಳಿಯ ಗಿಂಡಿಗಳಬೆಳಗಿದರು ಅತ್ತೆಮ್ಮ। ಚಿನ್ನಾದ ಹರಿವಾಣ ಬೆಳಗಿದರು । ಎದುರಿಗೆ ಹಾಲು ನೀರು ತಕ್ಕೊಂಡು ಹೋದಾರು ಅತ್ತೆಮ್ಮ ॥ ನೀರನ್ನೆ ತೆಗೆದು ಕೈ ಕಾಲು ಮುಖತೊಳೆದು । ಹಾಲನ್ನೆ ತೆಗೆದು ಬಾಯಾರಿಕೆ ಕಳೆದಾನು । ತೂಗುವ ಮಂಚದಲ್ಲಿ ಕೂತಾರೀಗ ॥ ಏನಾಗಿ ಬಂದೀರಳಿಯ, ಎಂಥದಾಗಿ ಬಂದೀರಳಿಯ, ಬಂದಂಥ ಕಾರ್ಯ ತಿಳೂದೇಳಿ । ಓಲೆಯನ್ನೆ ತೆಗೆದು ಕೊಟ್ಟಾನು । ಓಲೆ ಓದಿ ನೋಡಿದರು ಮಾವನವರು ಬೇಗದಿಂದ ಓಲೆ ಓದಿದಾರು ॥ ಮಡದಿಯೆ ನೀ ಕೇಳೂ, ಮಡದಿಯೆ ನೀಕೇಳೂ ನೂರೊಂದು ಅನ್ನದಡಿಗೆ ಮಾಡು ಬೇಗ । ದೊಡ್ಡ ಮಾಳಿಗೆಯೊಳಗೆ ನಡೆದಾರು ಮಾವನವರು । ದೊಡ್ಡ ಪೆಟ್ಟಿಗೆ ತೆಗೆದಾರು । ಪೆಟ್ಟಿಗೆ ಕೀಲು ಸಡಿಲಿಸಿ ಮಾವನವರು ಕೋಲ್ಕಂಬಿ ದೋತ್ರ ತೆಗೆದಾರು ॥ ಮುದ್ರೆ ಸೇಟಾ ತೆಗೆದು ಎರಕಾಗಿ ಇರುಸಿ ಅಳಿಯನರಮನೆಗೆ ಹೊರಟಾರು । ವಜ್ರದ ಶರಟುಗಳ ತೆಗೆದು ಭುಜನೇರಿ ಇಳುಸಿದಾರು, ಅಳಿಯನರಮನೆಗೆ ಹೊರಟಾರು ॥ ಅಳುದ್ದ ಕೊಲ್ಕೊಡೆ ಹಿಡಿದಾರು ಮಾವನವರು ಅಳಿಯನರಮನೆಗೆ ಹೊರಟಾರು ॥ ಅತ್ತೆಮ್ಮ ಎದ್ದಾರು ಸಣ್ಣ ಮಾಳಿಗೆಯೊಳಗೆ ನಡೆದಾರು । ಸಣ್ಣ ಪೆಟ್ಟಿಗೆ ತೆಗೆದಾರು ಅತ್ತೆಮ್ಮ । ಪೆಟ್ಟಿಗೆ ಕೀಲು ಸಡಿಲಿರುಸಿ ಜರಿಬಂದ ಸೀರೆ ಉಟ್ಟಾರೀಗ ॥

(ಮುಂದುವರಿಯುವುದು)

# ಕೊಡಗಿನ ಕೈಲ್ ಮುಹೂರ್ತ

**ಸಾ**ಮಾನ್ಯವಾಗಿ ಕೈಲ್ ಮುಹೂರ್ತ ಹಬ್ಬವನ್ನು ಕೊಡಗಿನಲ್ಲಿ ನಾಟಿ ಕೆಲಸ ಕಳೆದ ನಂತರ ರೈತಾಪಿ ಜನರು ವಿರಾಮವಾಗಿ ಊಟ ಉಪಚಾರ ಮಾಡಿ ಸಂತೋಷದಿಂದ ಕಾಲ ಕಳೆಯುವುದಕ್ಕಾಗಿ ಮಾಡುವ ಹಬ್ಬವೆಂದು ತಿಳಿದಿದ್ದಾರೆ.

ಭಾರತೀಯ ಸಂಸ್ಕೃತಿಯಲ್ಲಿ ಯಾವುದೇ ಒಂದು ಕೆಲಸಕ್ಕೆ ದೇವರನ್ನು ಪ್ರಾರ್ಥಿಸದೆ ಕೆಲಸ ಪ್ರಾರಂಭವಿಲ್ಲ.

ಹಿಂದಿನ ಕಾಲದಲ್ಲಿ ವ್ಯವಸಾಯಗಾರನು ವ್ಯವಸಾಯವನ್ನು ಮಾಡುತ್ತಿದ್ದ ಸಂದರ್ಭ ಬಂದಾಗ ಅವನು ಯುದ್ಧವನ್ನು ಮಾಡುತ್ತಿದ್ದರೂ ಸಹ ಭಾರತದಾದ್ಯಂತ ಮಳೆಗಾಲ

ಪ್ರೊ॥ ಪೂಜಾರಿ ನೊಣ್ಣಪ್ಪ,
ಬೆಂಗಳೂರು

ದಲ್ಲಿ ಹಿಂದಿನ ಕಾಲದಲ್ಲಿ ಯುದ್ಧ ಮಾಡುತ್ತಿರಲಿಲ್ಲ. ಕಾರಣವೆಂದರೆ ಯುದ್ಧ ಮಾಡುವವರು ಕಾಲಾಳು, ಕುದುರೆ, ಆನೆ, ರಥಗಳನ್ನು ಉಪಯೋಗಿಸಿ ಯುದ್ಧ ಮಾಡಬೇಕಿತ್ತು. ಮಳೆಗಾಲದಲ್ಲಿ ನದಿಗಳಲ್ಲಿ ನೀರು ತುಂಬಿ ಹರಿಯುತ್ತಿದ್ದುದರಿಂದ ನದಿಯನ್ನು ಕಾಲಾಳುಗಳು, ಕುದುರೆಗಳು, ಆನೆಗಳು ಮತ್ತು ರಥಗಳು ದಾಟಲು ಸಾಧ್ಯವಿತ್ತಿಲ್ಲ. ಆದ್ದರಿಂದ ಮಳೆಗಾಲ ಕಳೆದ ನಂತರವೇ ಯುದ್ಧಗಳನ್ನು ಮಾಡಲು ಸಾಧ್ಯವಾಗುತ್ತಿತ್ತು. ಆ ರೀತಿ ಮಳೆಗಾಲದ ನಂತರ ಯುದ್ಧ ಮಾಡಬೇಕಾದರೆ ತಮ್ಮ ಆಯುಧಗಳಿಗೆ ಪೂಜೆ ಸಲ್ಲಿಸಿ ಯುದ್ಧ ಪ್ರಾರಂಭಿಸುತ್ತಿದ್ದರು. ಅದಕ್ಕಾಗಿಯೇ ಆಯುಧಪೂಜೆಯನ್ನು ಆಚರಿಸುವ ಪದ್ಧತಿ ಜಾರಿಗೆ ಬಂತು.

ಕೊಡಗಿನಿಂದ ಹೊರಗಿನ ಪ್ರದೇಶಗಳಲ್ಲಿ ಈ ಆಯುಧಪೂಜೆಯನ್ನು ದುರ್ಗಾಷ್ಟಮಿಯ ನಂತರ ಮಹಾನವಮಿಯ ದಿನ ಆಚರಿಸುತ್ತಾರೆ. ಆ ದಿನ ಪ್ರತಿಯೊಬ್ಬರೂ ತಮ್ಮ ತಮ್ಮ ಆಯುಧಗಳನ್ನು ಶುಚಿಮಾಡಿ ಗಂಧ ಲೇಪಿಸಿ ಪೂಜಿಸುತ್ತಾರೆ.

ಕೊಡಗಿನಲ್ಲಿ ತಮಿಳು ತಿಂಗಳು ಮತ್ತು ಮಲೆಯಾಳಿ ಸಿಂಹ, ತುಳು ತಿಂಗಳು ಸೋಣ 7, 9, 11 ಮತ್ತು 18ಕ್ಕೆ ಆಚರಿಸುತ್ತಾರೆ. ಈ ಆಯುಧ ಪೂಜೆಯನ್ನು ಕೈಲ್‌ಮುಹೂರ್ತ ವೆಂದು ಕರೆಯುತ್ತಾರೆ. ಕೈಲ್ ಪೊಳ್ದ್" ಎಂಬ ಪದವು ತಮಿಳು ಭಾಷೆಯ "ಕೊಯಿಲ್ ಪೊಳ್ದ್"ದಿಂದ ಅಪಭ್ರಂಶವಾಗಿ ಬಂದ ಪದ. ತಮಿಳಿನಲ್ಲಿ ಕೊಯಿಲ್ ಅಂದರೆ ದೇವಸ್ಥಾನ. ಪೊಳ್ದ್ ಅಂದರೆ ಮುಹೂರ್ತ ಅಥವಾ ಸಮಯ ವೆಂದರ್ಥ.

ಕೊಡಗು 1600ರ ಇಸವಿಯವರೆಗೆ [ಕೊಡಗು ಅಂದರೆ ಆಗಿನ ಕಾಲದಲ್ಲಿ ಹಟ್ಟಿಹೊಳೆಯಿಂದ ದಕ್ಷಿಣಕ್ಕೆ ಲಕ್ಷ್ಮಣ ತೀರ್ಥ ನದಿ ಹರಿಯುವ ಸ್ಥಳಕ್ಕೆ ಕೊಡಗು ಎಂದು ಹೆಸರಿತ್ತು.] ತಮಿಳು ಹಾಗೂ ಮಲೆಯಾಳದ ರಾಜ್ಯಭಾರಕ್ಕೆ ಒಳಪಟ್ಟಿತ್ತು.

ಇದಕ್ಕೆ ಮುಖ್ಯ ಕಾರಣ ಕ್ರಿಸ್ತ ಶಕದ ಆದಿ ಭಾಗದಿಂದ 1605ರವರೆಗೆ ಹಟ್ಟಿಹೊಳೆ ದಕ್ಷಿಣ ಭಾಗದ ಕೊಡಗು ಒಂದಲ್ಲ ಒಂದು ರೀತಿಯಲ್ಲಿ ತಮಿಳರ ಆಡಳಿತಕ್ಕೆ ಒಳಪಟ್ಟಿತ್ತು. ಕ್ರಿ.ಶ. ಎರಡನೇ ಶತಮಾನದಲ್ಲಿ ಪಾಂಡ್ಯರಾಜನಾದ (ತಮಿಳು) ನೆಡುಚುಳಿಯನ್ ಚೋಳ ಮತ್ತು ಚೇರ [ಈಗಿನ ಕೇರಳ) ರಾಜರುಗಳನ್ನು ಸೋಲಿಸಿ ತನ್ನ ರಾಜ್ಯ ವಿಸ್ತರಿಸಿದನಲ್ಲದೆ ಆ ಬಗ್ಗೆ 'ಕುಡಕಂಕುನಗ ಕುಡಲ್ ಕುಮಾರಿ ತಿರುವಂಗಡಂ ಇನ್ನಾಂಗು ತಮಿಳು ನೆಟ್ಟಿನ್ ಎಲ್ಲಾಯಿ' ಎಂದು ತಮಿಳು ಸಾಹಿತ್ಯದಲ್ಲಿ ವಿವರಿಸಲಾಗಿದೆ. ಇದರ ಅರ್ಥ ತಮಿಳು ರಾಜ್ಯವು ಒಂದೆಡೆ ಕೊಡಗಿನಿಂದ ಬಂಗಾಳಕೊಲ್ಲಿಯವರೆಗೂ, ಮತ್ತೊಂದೆಡೆ ಕನ್ಯಾಕುಮಾರಿಯಿಂದ ತಿರುಪತಿಯ ವರೆಗೂ ಇದೆ ಎಂದಾಗಿದೆ ಆ ಕಾಲದಲ್ಲಿ ಕೊಡಗನ್ನು ಕುಡಕಾಂ ಕುಡುಮಲೆ ನಾಡು ಎಂದು ಕರೆಯಲಾಗುತಿತ್ತು.

ತಮಿಳರಾದ ಪಾಂಡ್ಯ, ಚೋಳರು ಆಳುತ್ತಿದ್ದರೆಂಬುದಕ್ಕೆ ಸೋಮವಾರಪೇಟೆಯ ಬಾಳುಗೋಡು, ಬಸವನ ಹಳ್ಳಿ ಮುಂತಾದ 20 ಗ್ರಾಮಗಳಲ್ಲೂ, ವಿರಾಜಪೇಟೆಯ ಅರವೇರಿ, ಐಮಂಗಲ ಕುಕ್ಲೂರು ಹಾತೂರು ಗ್ರಾಮಗಳಲ್ಲಿ ಇರುವ ಪಾಂಡವ ಪಾರೆಗಳು ಪಾಂಡರು ಇಲ್ಲಿ ರಾಜ್ಯಭಾರ ಮಾಡುತ್ತಿದ್ದರೆನ್ನುವುದಕ್ಕೆ ಸಾಕ್ಷಿಯಾಗಿದೆ. ಭಾಗಮಂಡಲ ಮತ್ತು ಪಾಲೂರು ದೇವಸ್ಥಾನದ ಹತ್ತಿರ ಇರುವ ಶಿಲೆಗಳಲ್ಲಿ ಬರೆದಿರುವ ಶಿಲಾಶಾಸನ ಸಂಸ್ಕೃತ, ತಮಿಳು ಮತ್ತು ಮಲೆಯಾಳು ಭಾಷೆಯಲ್ಲಿರುವುದರಿಂದ ಈ ಪ್ರದೇಶ ತಮಿಳರ ಹಾಗೂ ಮಲೆಯಾಳದ ಭಾಗವಾಗಿತ್ತೆಂದು ಕಂಡುಬರುತ್ತದೆ.

ಮಹಾಭಾರತದ ಕಥೆಯಂತೆ ಪಾಂಡವರು ಕೌರವರನ್ನು ಸೋಲಿಸಬೇಕಾದರೆ ಶಿವನನ್ನು ತಪಸ್ಸು ಮಾಡಿ ಪಾಶುಪತಾಸ್ತ್ರವನ್ನು ಪಡೆದು ಸೋಲಿಸಬೇಕೆಂದು ವೇದವ್ಯಾಸರ ಉಪದೇಶದಂತೆ ಅರ್ಜುನನನ್ನು ಧರ್ಮರಾಯ ಕಳುಹಿಸಿದನೆಂದೂ, ಅರ್ಜುನನು ತಪಸ್ಸಿಗಾಗಿ ಪಶ್ಚಿಮಘಟ್ಟಕ್ಕೆ ಬಂದನೆಂದೂ, ಅವನ ಭಕ್ತಿ ಮತ್ತು ಧೈರ್ಯವನ್ನು ಪರೀಕ್ಷಿಸಲು ಶಿವನು ಕಿರಾತನ ವೇಷವನ್ನು ಧರಿಸಿ ಒಂದು ಮಾಯಾ ಹಂದಿಯನ್ನು ಸೃಷ್ಟಿಸಿ ಅರ್ಜುನನ ಕಡೆಗೆ ಕಳುಹಿಸಿದನೆಂದೂ, ಅರ್ಜುನನು ತನ್ನ ಬಾಣದಿಂದ ಹಂದಿಗೆ ಹೊಡೆದಾಗ ಮೃತಪಟ್ಟಿತೆಂದೂ, ಆಗ ಕಿರಾತಕ ವೇಷದ ಶಿವನು ಆ ಹಂದಿ ತನ್ನದೆಂದು ಹೇಳಿದಾಗ ಅರ್ಜುನನು ತಾನು ಅದನ್ನು ಕೊಂದದೆಂದು ಹೇಳಿ ಕಿರಾತಕವೇಷದ ಶಿವನಿಗೂ ಅರ್ಜುನನಿಗೂ ವಾಗ್ವಾದ ಪ್ರಾರಂಭವಾಗಿ ಘೋರ ಯುದ್ಧ

ವಾಯಿತೆಂದು ಈ ಯುದ್ಧದಲ್ಲಿ ಅರ್ಜುನನ ಹತ್ತಿರವಿದ್ದ ಆಯುಧಗಳೆಲ್ಲಾ ಖಾಲಿಯಾಗಿ, ಹತ್ತಿರದಲ್ಲಿದ್ದ ಮರದ ರೆಂಬೆ ಕೊಂಬೆಗಳಿಂದ, ಕಲ್ಲುಗಳಿಂದ ಹೂವುಗಳಿಂದ ಶಿವನ ಮೇಲೆ ಎಸೆದಾಗ ಒಂದೊಂದು ಹತ್ತು ಪಾಲಿನ ಸಂಖ್ಯೆಯಾಗಿ ಅರ್ಜುನನು ಸೋಲನ್ನು ಅನುಭವಿಸುವ ಹಂತಕ್ಕೆ ತಲುಪಿದಾಗ ಆ ಕಿರಾತನೇ ಶಿವನೆಂದು ಗೊತ್ತಾಗಿ ಶಿವನ ಪಾದದ ಮೇಲೆರಗುತ್ತಾನೆಂದೂ ಪುರಾಣ ಇದೆ. ಶಿವನು ಅರ್ಜುನನ ಧೈರ್ಯ ಮತ್ತು ಭಕ್ತಿಗೆ ಮೆಚ್ಚಿ ಪಾಶುಪತಾಸ್ತ್ರವನ್ನು ದಯಪಾಲಿಸಿ ಮಾಯವಾಗುತ್ತಾನೆ. ಆಗ ಅರ್ಜುನನು ಮತ್ತು ಅಲ್ಲಿ ಸೇರಿದ್ದ ಕಿರಾತರು ಸೇರಿ ಪಾಶುಪತಾಸ್ತ್ರಕ್ಕೆ ಪೂಜೆ ಮಾಡುತ್ತಾರೆ. ನಂತರ ಅರ್ಜುನನ ಬಾಣ ತಗಲಿ ಸತ್ತಿದ್ದ ಹಂದಿಯನ್ನು ಅಲ್ಲಿದ್ದ ಕಿರಾತರು ಎಲ್ಲರೂ ಸೇರಿ ಹಂದಿ ಮಾಂಸವನ್ನು ಶಿವನ ಪ್ರಸಾದವೆಂದು ತಿನ್ನುತ್ತಾರೆ.

ಈ ರೀತಿ ಕಿರಾತ–ಅರ್ಜುನನ ಕಾಳಗ ವಿರಾಜಪೇಟೆ ತಾಲ್ಲೂಕಿನ ಆರ್ಜಿ ಗ್ರಾಮದ ಬೆಟ್ಟದಲ್ಲಿ ನಡೆಯಿತೆಂದು ಕೆಲವರ ಊಹೆ. ಆ ಬೆಟ್ಟದ ಮೇಲೆ ಒಂದು ಈಶ್ವರ ದೇವಸ್ಥಾನ ಈಗಲೂ ಇದೆ ಎಂದು ನೋಡಿದವರು ಹೇಳುತ್ತಾರೆ ಅದರ ಹತ್ತಿರವಿರುವ ಭಾಗಕ್ಕೆ ಈಗಲೂ ಹಂದಿ ಗುಂಡಿ ಎಂದು ಕರೆಯುತ್ತಾರೆ ಎಂದು ಹೇಳುತ್ತಾರೆ.

ಆದುದರಿಂದ ಕೊಡಗಿನಲ್ಲಿ ಕೈಲ್ ಮುಹೂರ್ತದ ದಿನ ಬೆಳಿಗ್ಗೆ 4 ಗಂಟೆಗೆ ಎದ್ದು ತಮ್ಮ ತಮ್ಮ ಆಯುಧಗಳನ್ನು ಶುಚಿಗೊಳಿಸಿ ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿದ ನಂತರ ಆಯುಧ ಪೂಜೆ ಮಾಡಿ ಹಂದಿಗೆ ಗುಂಡು ಹೊಡೆದು ಹಂದಿಮಾಂಸದ ಭಕ್ಷ್ಯವನ್ನು ತಿನ್ನುವ ಪದ್ಧತಿಗೂ ಕಿರಾರ್ಜುನರ ಯುದ್ಧದ ಕಾಲದಲ್ಲಿ ಕೊಂದ ಹಂದಿಯನ್ನು ಈಶ್ವರನ ಪ್ರಸಾದವೆಂದು ತಿಂದ ಕಥೆಗೂ ಕೊಡಗಿನ ಆಯುಧ ಪೂಜೆಯ ನಂತರ ಹಂದಿಯನ್ನು ಕೊಂದು ಊಟ, ತಿಂಡಿಯನ್ನು ಏರ್ಪಡಿಸುವ ರೀತಿಗೂ ಸಾಮ್ಯ ಇದೆ.

ಕೈಲ್ ಮುಹೂರ್ತ ಹಬ್ಬದ ಪ್ರಾರಂಭ ಸಿಂಹಮಾಸ ಯಾ ಸೋಣ ತಿಂಗಳ 7ನೇ ದಿನ ಪ್ರಾರಂಭವಾಗುತ್ತದೆ. ಆ ದಿನ ಇಗ್ಗುತಪ್ಪ ದೇವಸ್ಥಾನದಲ್ಲಿ ಪೂಜೆ ಸಲ್ಲಿಸಿ ಆಯುಧ ಪೂಜೆಯನ್ನು ಮಾಡುತ್ತಾರೆ. ಆದರೆ ಕೊಡಗು ರಾಜರ ಕಾಲದಲ್ಲಿ ಪ್ರತಿಯೊಬ್ಬರ ಮನೆಯಿಂದ ಅವರ ಮನೆ ಕಾವಲಿಗೆ ಹೋಗಬೇಕಾದುದರಿಂದ ಸೋಣ 7, 9, 11 ಮತ್ತು 18ರಲ್ಲಿ ಆಚರಿಸುವಂತೆ ಏರ್ಪಡಿಸಿ, ಭರತ ಖಂಡದಲ್ಲಿ ಯಾವುದೇ ಒಂದು ಹಬ್ಬ ಆಚರಿಸುವುದಾಗಲೀ ಪುರಾತನ ದೇವಸ್ಥಾನಗಳ ಸ್ಥಾಪನೆಗಳಿಗಾಗಲೀ ಒಂದು ಪುರಾಣ ಇದೆ. ಅದೇ ರೀತಿ ಕೊಡಗಿನ ಕೈಲ್ ಮುಹೂರ್ತ ಹಬ್ಬ ಆಚರಣೆಯೂ ಆಗಿದೆ.

ಪುರಾತನ ಕಾಲದಲ್ಲಿ ಶಿವನಿಗೆ ಹಣ್ಣು ಹಂಪಲಿನ ನೈವೇದ್ಯ ಹಾಗೂ ಪುರೋಹಿತರಿಂದ ಪೂಜೆ ನಡೆಯುತ್ತಿತ್ತು. ಆದರೆ ಮಹಮದೀಯರ ಪ್ರಭಾವದಿಂದ ಮಾಂಸಹಾರಿಗಳು ಮಾಂಸಹಾರದ ಭೋಜನಕ್ಕಾಗಿ ಎಲ್ಲಿ ಹಿಂದೂ ಮತ ಬಿಟ್ಟು ಇಸ್ಲಾಂ ಮತವನ್ನು ಸೇರಿಬಿಡುವರೋ ಎಂಬ ಭೀತಿಯಿಂದ ಅವಧೂತಯೋಗಿಗಳ ಶಿಷ್ಯವೃಂದದವರು ಸನಾತನ ಧರ್ಮದ ಉದ್ಧಾರಕ್ಕಾಗಿ ಮನುಷ್ಯ ಯಾವ ಆಹಾರವನ್ನು ಸೇವಿಸುತ್ತಾನೋ ಅದನ್ನೇ ದೇವರಿಗೆ ನೈವೇದ್ಯವಾಗಿ ಕೊಡಬಹುದೆಂಬ ಬದಲಾವಣೆಯಿಂದ ಈಶ್ವರನ ಅಸುರ ಅವತಾರಗಳಾದ ಭೈರವೇಶ್ವರ ಮುಂತಾದ ಗಂಡು ದೇವತೆಗಳಿಗೂ ಪಾರ್ವತಿಯ ಅಸುರಾವತಾರವಾದ ಚಂಡಿ, ಆದಿಶಕ್ತಿ, ಭಗವತಿ, ಚಾಮುಂಡೇಶ್ವರಿ, ದುರ್ಗಿ ಮುಂತಾದ ಹೆಣ್ಣು ದೇವತೆಗಳಿಗೆ ಭಕ್ತನು ಯಾವ ಆಹಾರವನ್ನು ತಿನ್ನುತ್ತಾನೋ ಅದೇ ಆಹಾರವನ್ನು ನೈವೇದ್ಯವಾಗಿ ಇಡುವ ಪರಿಪಾಠ ಪ್ರಾರಂಭವಾಗಿ ಈ ದೇವತೆಗಳಿಗೆ ಹಂದಿ, ಕುರಿ, ಕೋಳಿಯ ಬಲಿ ಕೊಡುವ ಪದ್ಧತಿ ಪ್ರಾರಂಭವಾಯಿತು.

ಕೊಡಗಿನಲ್ಲಿ ಈ ರೀತಿ ಹಂದಿ ಮಾಂಸದ ಆಹಾರ ಬಳಕೆಗೆ ಇನ್ನೊಂದು ಕಾರಣವೂ ಇದೆ. ಹಿಂದಿನ ಕಾಲದಲ್ಲಿ ಕೊಡಗು ಭಯಂಕರ ಕಾಡುಗಳಿಂದ ಕೂಡಿದ್ದು ಜನರು ಬೆಳೆದ ಭತ್ತದ ಬೆಳೆಯನ್ನು ಕಾಡು ಹಂದಿಗಳು ತಿಂದು ನಾಶ ಮಾಡುವ ಪರಿಸ್ಥಿತಿ ಇದ್ದುದರಿಂದ ಕೊಂದ ಹಂದಿ ಮಾಂಸವನ್ನು ತಿನ್ನುವುದು ಜನರ ಮೇಲೆ ಅನಿವಾರ್ಯ ಪರಿಣಾಮ ಬೀರಿದೆ. ಅಲ್ಲದೆ "ಕೊಂದ ಪಾಪ ತಿಂದು ಪರಿಹಾರ"ಎಂಬ ಗಾದೆಗೂ ಅದನ್ನು ಅಳವಡಿಸಿಕೊಂಡಿದ್ದಾರೆಂದು ಹೇಳಬಹುದು.

## ನಗೆ ಹನಿಗಳು

ನಿಮ್ಮ ಬಳಿ ಫೋನ್, ಟಿವಿ, ಫ್ರಿಡ್ಜ್, ಸ್ಕೂಟರ್, ಸೈಕಲ್ ಮೊದಲಾದ ಎಲ್ಲ ಸಾಮಾನುಗಳು ಇವೆಯೇ ?

'ಹೌದು... ನೀವು ಸರ್ವೆ ಮಾಡುತ್ತಿದ್ದೀರಾ ?'

'ಇಲ್ಲ... ನಿಮ್ಮ ಪಕ್ಕದ ಮನೆಗೆ ಬಾಡಿಗೆಗೆ ಬರಲಿದ್ದೇನೆ !'

● ● ●

'ಸಾರ್... ನಿಮ್ಮಲ್ಲಿ ಯಾರಾದರೂ ತಪ್ಪಿಸಿಕೊಂಡಿದ್ದಾರೆಯೇ ? ಒಂದು ಪ್ರಮುಖ ರಾಜಕೀಯ ಪಕ್ಷದ ಯುವ ವಿಭಾಗಕ್ಕೆ ಫೋನ್ ಬಂತು.'

'ಇಲ್ಲವಲ್ಲ ! ಏನಾಯಿತು ?'

'ನನ್ನ ಹೆಂಡತಿಯನ್ನು ಯಾರೋ ಹಾರಿಸಿಕೊಂಡು ಹೋಗಿದ್ದಾರೆ ಅದಕ್ಕೆ !'

○ ವಿಜಯ್, ಮೈಸೂರು

# ಆರೋಗ್ಯ ಚಿಂತನ

## ಹುಚ್ಚು ನಾಯಿ ರೋಗ ಒಂದು ಭಯಂಕರ ವ್ಯಾಧಿ

ಹುಚ್ಚು ನಾಯಿ ರೋಗ ಬಹುಶಃ ಮಾನವನಿಗೆ ಒಂದು ಭಯಾನಕವಾದ ಕಾಯಿಲೆ. ಇದು ಪ್ರಾಣಿಗಳಿಂದ ಪ್ರಾಣಿಗಳಿಗೆ ಅಥವಾ ಪ್ರಾಣಿಗಳಿಂದ ಮಾನವನಿಗೆ ಅಥವಾ ಈ ರೋಗದಿಂದ ನರಳುತ್ತಿರುವ ಪ್ರಾಣಿಯು ಕಡಿತದಿಂದ ಅಥವಾ ನೆಕ್ಕುವುದರಿಂದ ಅದರ ಜೊಲ್ಲಿನಲ್ಲಿರುವ ಸೂಕ್ಷ್ಮಾಣುಗಳ ಮೂಲಕ ಹರಡುತ್ತದೆ. ಸೂಕ್ಷ್ಮಾಣುಗಳು ನರಮಂಡಲದ ಮೇಲೆ ಧಾಳಿ ಮಾಡುವುದರಿಂದ ಈ ರೋಗಕ್ಕೆ ತುತ್ತಾದವರು ಬುದ್ಧಿ ಸ್ವಾಧೀನ ಕಳೆದುಕೊಂಡು ಸಾವಿಗೀಡಾಗುವುದು ಸಹಜ.

ಪುರಾತನ ಕಾಲದಿಂದಲೂ ಮಾನವ ಈ ರೋಗದ ಬಗ್ಗೆ ತಿಳಿದಿದ್ದಾನೆ. 1885ರಲ್ಲಿ ಲೂಯಿಸ್ ಪ್ಯಾಶ್ಚರ್ ಎಂಬ ವಿಜ್ಞಾನಿಯು ಈ ರೋಗದ ವಿರುದ್ಧ ಸಾರಿದಸಮರದಲ್ಲಿ ಯಶಸ್ಸು ಪಡೆದರು. ಅವರು ಮೊಟ್ಟ ಮೊದಲ ಬಾರಿಗೆ ಈ ರೋಗದಿಂದ ನರಳುತ್ತಿದ್ದ ರೋಗಿಯನ್ನು ಚುಚ್ಚು ಮದ್ದು ಹಾಕುವುದರ ಮೂಲಕ ಬದುಕಿಸಿದ್ದರು. ಅಂದಿನಿಂದಲೇ ಈ ರೋಗದ ಉಪಚಾರದಲ್ಲಿ ಒಂದು ಹೊಸ ಆಯಾಮ ರೂಪುಗೊಂಡಿತು.

ರೋಗಕ್ಕೆ ಕಾರಣ : ಈ ರೋಗವು ರಾಬ್ಡೋವೈರಿಡೆ ಎಂಬ ಪಂಗಡಕ್ಕೆ ಸೇರುವ ಬುಲೆಟ್ ಆಕಾರದ ಆರ್.ಎನ್.ಎ. ಸೂಕ್ಷ್ಮಾಣು [ವೈರಸ್]ವಿನಿಂದ ಹರಡುತ್ತದೆ. ಈ ಸೂಕ್ಷ್ಮಾಣುಗಳು ಸಸ್ತನಿಗಳಲ್ಲಿ ಹುಳು ಮತ್ತು ಕೀಟಗಳಲ್ಲಿ ಕಂಡುಬರುತ್ತವೆ. ಈ ರೋಗಾಣುಗಳನ್ನು ಬಿಸಿಲಿನಿಂದ ಅಲ್ಟ್ರಾವಯೋಲೆಟ್ ಕಿರಣದಿಂದ ಒಣಗಿಸುವುದರಿಂದ, ಬಿಸಿಮಾಡುವುದರಿಂದ, 0 1% ಟ್ರಿಪ್ಸಿನ್‌ನಿಂದ ಹಾಗೂ ಬಹುತೇಕ ಆಂಟಿಸೆಪ್ಟಿಕ್ ದ್ರಾವಣದಿಂದ ನಾಶಗೊಳಿಸಬಹುದು.

ವಾಸ್ತವಿಕತೆ : ರೇಬೀಸ್ ರೋಗವು ಪ್ರಪಂಚಾದ್ಯಂತ ಕಂಡುಬರುತ್ತದೆ. ಪ್ರಪಂಚದ ಮುಂದುವರೆಯುತ್ತಿರುವ ರಾಷ್ಟ್ರಗಳಲ್ಲಿ 50,000ಕ್ಕೂ ಹೆಚ್ಚು ಜನರು ಪ್ರತಿವರ್ಷ ಸಾವಿಗೀಡಾಗುತ್ತಾರೆ.

ಈ ಖಾಯಿಲೆಗೆ ಮಕ್ಕಳು ಹೆಚ್ಚಾಗಿ ತುತ್ತಾಗುತ್ತಾರೆ ಹಾಗೂ ಈ ಖಾಯಿಲೆಯಿಂದ ನರಳುವ ಪ್ರಾಣಿಗಳನ್ನು ಉಪಚರಿಸುವ ಪಶುವೈದ್ಯರಿಗೆ ರೇಬೀಸ್ ಸೋಂಕುವ ಸಾಧ್ಯತೆಯು ಹೆಚ್ಚು.

ಭಾರತ ದೇಶದಲ್ಲಿ ನಾಯಿಗಳ ಸಂಖ್ಯೆ ಸುಮಾರು 20 ಮಿಲಿಯನ್ ಇರುತ್ತದೆ. ಇದರಲ್ಲಿ ಶೇಕಡಾ 80ರಷ್ಟು ನಾಯಿಗಳು ಬೀದಿನಾಯಿಗಳಾಗಿದ್ದು, ಸರಿಯಾದ ಪಾಲಕರು ಅಥವಾ ಪೋಷಕರಿಲ್ಲದೆ ಇವುಗಳು ರೇಬೀಸ್ ಕಾಯಿಲೆಯನ್ನು ಮಾನವನಿಗೆ ಹಾಗೂ ಇತರೆ ಪ್ರಾಣಿಗಳಿಗೆ ಹರಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ನಮ್ಮ ದೇಶದಲ್ಲಿ ಪ್ರತಿವರ್ಷ ಶೇಕಡ 20ರಷ್ಟು ಜನರು ರೇಬೀಸ್ ಸೋಂಕಿಗೆ ತುತ್ತಾಗಿ ಚುಚ್ಚುಮದ್ದು ಪಡೆಯುತ್ತಿದ್ದಾರೆ.

ರೋಗ ಹರಡುವಿಕೆ : ಕಾಡು ಪ್ರಾಣಿಗಳು ಈ ರೋಗದ ಸೋಂಕನ್ನು ಸತತವಾಗಿ ಹರಡುತ್ತದೆ. ಸಸ್ತನಿಗಳು, ರಕ್ತ ಹೀರುವ ಕೀಟಗಳು ಹಾಗೂ ಸಾಕು ಪ್ರಾಣಿಗಳು ಮುಂತಾದವು ಕೂಡ ಈ ರೋಗವನ್ನು ಹರಡುವುದರಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಸಾಕುಪ್ರಾಣಿಗಳು ಈ ರೋಗವನ್ನು ಕಾಡು ಪ್ರಾಣಿಗಳಿಂದ ಪಡೆಯುತ್ತವೆ ಮತ್ತು ಇದನ್ನು ಇತರ ಪ್ರಾಣಿಗಳಿಗಾಗಲಿ ಅಥವಾ ಮನುಷ್ಯನಿಗಾಗಲಿ ಕಚ್ಚುವುದರಿಂದ ಹರಡುತ್ತದೆ.

ರೇಬೀಸ್ ರೋಗದ ಸೂಕ್ಷ್ಮಾಣುಗಳು ಘಾಸಿಗೊಂಡ ಚರ್ಮದೊಳಗೆ ಸುಲಭವಾಗಿ ಸೇರಿಕೊಳ್ಳುತ್ತವೆ. ರೇಬೀಸ್‌ನಿಂದ ನರಳುತ್ತಿರುವ ಪ್ರಾಣಿಗಳು ಕಚ್ಚುವುದರಿಂದ ಈ ರೋಗ ಮನುಷ್ಯರಿಗೆ ಬರುತ್ತದೆ.

ರೋಗದ ಲಕ್ಷಣಗಳು : ಈ ರೋಗಕ್ಕೆ ತುತ್ತಾದ ಸುಮಾರು 20 ರಿಂದ 90 ದಿನಗಳಲ್ಲಿ ಕಾಣಿಸಿಕೊಳ್ಳುತ್ತದೆ. ಈ ರೋಗವು ಪಕ್ವಸ್ಥಿತಿಗೆ ಬರಲು ಒಂದುವಾರದಿಂದ ಹಲವು ವರ್ಷಗಳೇ ಹಿಡಿಯಬಹುದು. ಅತಿ ಕಡಿಮೆ ಪಕ್ವಸ್ಥಿತಿಯು ಮಕ್ಕಳಲ್ಲಿ ಅಥವಾ ಕಚ್ಚಿದ ಗಾಯ, ತಲೆ, ಮುಖ ಅಥವಾ ಕುತ್ತಿಗೆಯ ಬಳಿಯಿದ್ದಲ್ಲಿ ಕಂಡುಬರುತ್ತದೆ [ಸರಾಸರಿ 35 ದಿನಗಳು] ಗಾಯ ಬೇರೆ ಕಡೆಯಾದಲ್ಲಿ ಉದಾಹರಣೆಗೆ ಕಾಲಿನ ಮೇಲೆ ಆದಲ್ಲಿ ಸರಾಸರಿ 52 ದಿನಗಳಾಗಬಹುದು. ಸೂಕ್ಷ್ಮಾಣುಗಳು ಕಚ್ಚಿದ ಸ್ಥಳದಲ್ಲೇ ದ್ವಿಗುಣಗೊಳ್ಳುತ್ತದೆ. ನಂತರ ಹತ್ತಿರದ ನರಗಳ ತುದಿಗಳನ್ನು ಭೇದಿಸಿಒಳಸೇರಿ ಮೆದುಳನ್ನು ತಲುಪುತ್ತವೆ. ನಂತರ ಮೆದುಳಿನಿಂದ ಜೊಲ್ಲು ಶ್ರವಿಸುವ ಗ್ರಂಥಿಗಳಲ್ಲಿ ಶೇಖರಣೆಯಾಗಿ, ಜೊಲ್ಲಿನಲ್ಲಿ ಸತತವಾಗಿ ಹೊರ ಹಾಕಲ್ಪಡುತ್ತವೆ.

ರೇಬೀಸ್ ರೋಗವು ಹಲವಾರು ವಿಧದಲ್ಲಿ ಕಾಣಿಸಿಕೊಳ್ಳಬಹುದು ಅದು ಯಾವುದೇ ರೂಪದಲ್ಲಿ ಕಾಣಿಸಿಕೊಂಡರೂ ಕೂಡ ಅಂತ್ಯ ಸಾವಿನಲ್ಲಾಗುತ್ತದೆ. ಪ್ರಮುಖವಾದ ರೂಪಗಳೆಂದರೆ :

1. ಉಗ್ರಸ್ವರೂಪದ ರೇಬೀಸ್ : ಇದು ಸಾಮಾನ್ಯವಾಗಿ ಕಂಡು ಬರುವಂತಹ ಸ್ವರೂಪ ಇದರ ಲಕ್ಷಣಗಳಾವುದೆಂದರೆ ಮೈಕೈ ಅದುರುವುದು, ಉಸಿರಾಟದ ತೊಂದರೆ, ಆಹಾರವನ್ನು ನುಂಗಲಾಗದಿರುವುದು, ಸತತವಾಗಿ ಜೊಲ್ಲು ಸುರಿಯುವುದು, ಸಿಕ್ಕ ಸಿಕ್ಕ ವಸ್ತುಗಳನ್ನೆಲ್ಲ ಕಚ್ಚುವುದು, ಹುಚ್ಚಾಪಟ್ಟೆ ಓಡಾಡುವುದು, ಒಂದೇ ಸಮನೆ ಕಿರುಚುವುದು ಮುಂತಾದವುಗಳು.

ಉಪಚಾರ : ಹುಚ್ಚುನಾಯಿ ರೋಗ ಒಮ್ಮೆ ಕಾಣಿಸಿಕೊಂಡರೆ ಸಾವು ಶತಸಿದ್ಧ. ಇದುವರೆಗೂ ಈ ರೋಗಕ್ಕೆ ಚಿಕಿತ್ಸೆ ಕಂಡು ಹಿಡಿಯಲಾಗಿಲ್ಲ. ಅದಾಗ್ಯೂ ಹುಚ್ಚುನಾಯಿ ಕಡಿತಕ್ಕೊಳಗಾದ ತಕ್ಷಣವೇ ಚುಚ್ಚುಮದ್ದು ಹಾಕಿಸುವುದರಿಂದ ರೋಗ ಬರದಂತೆ ತಡೆದು ರೋಗಿಯ ಪ್ರಾಣವನ್ನು ಕಾಪಾಡಬಹುದು. ಆದ್ದರಿಂದ ನಾಯಿ ಕಡಿತಕ್ಕೊಳಗಾದವರು ಕಡಿದ ನಾಯಿ ಹುಚ್ಚಾಗಿರಲಿ ಅಥವಾ ಇಲ್ಲದಿರಲಿ ತಕ್ಷಣ ವೈದ್ಯರಿಂದ ಉಪಚಾರ ಪಡೆಯಬೇಕು.

ಅದೇ ರೀತಿ ಮುಂಜಾಗ್ರತೆ ಕ್ರಮವಾಗಿ ಎಲ್ಲಾ ಸಾಕು ಪ್ರಾಣಿಗಳಿಗೂ ರೇಬೀಸ್ ವಿರುದ್ಧ ಕಾಲ ಕಾಲಕ್ಕೆ ಚುಚ್ಚುಮದ್ದು ಹಾಕಿಸುವುದು ಅವುಗಳಿಗೂ ಕ್ಷೇಮ ಮತ್ತು ಸಾಕುವವರಿಗೂ ಕ್ಷೇಮ. ○ —ಸಂಗ್ರಹ

## ನಗೆ ಬುಗ್ಗೆ

ಒಂದು ದಿನ ಅಪ್ಪ, ಅಮ್ಮ ಮಾತುಕತೆಯಲ್ಲಿ ತಲ್ಲೀನರಾಗಿದ್ದರು. ಮಗ ನಿತಿನ್ ಅಲ್ಲಿಗೆ ಬಂದು ಇಬ್ಬರಿಗೂ ಕೀಟಲೆ ಮಾಡಬೇಕೆನಿಸಿತು.

ಅಪ್ಪನನ್ನು ಕೇಳಿದ. ಅಪ್ಪ ನೀನು ನನ್ನನ್ನು ತುಂಬಾ ಪ್ರೀತಿಸುತ್ತೀಯಲ್ಲವೆ?

'ಹೌದು,' ಎಂದು ಅಪ್ಪ ಉತ್ತರಿಸಿದ.

'ಅಮ್ಮ ನೀನು'

'ಹೌದು' ಎಂದಳು ಅಮ್ಮ

'ಹಾಗಾದರೆ ನಾನು ಹೇಳಿದಂತೆ ನೀವು ಮಾಡಬೇಕು.'

'ಆಗಲಿ' ಎಂದರು ಇಬ್ಬರೂ. ಅದಕ್ಕೆ ನಿತಿನ್, ಅಮ್ಮ ನಾನು ಒಂದು, ಎರಡು, ಮೂರು ಎಂದಾಗ ನೀನು ಎಡಕೆನ್ನೆಗೆ ಮುದ್ದಿಸು. ಅಪ್ಪಾ ಒಂದು ಎರಡು ಮೂರು ಎಂದಾಗ ನೀನು ನನ್ನ ಬಲಕೆನ್ನೆಗೆ ಮುದ್ದಿಸು ಎಂದ.

ಹೇಳಿದಂತೆ ಮಾಡಿದ ಅಪ್ಪ, ಅಮ್ಮ ಮುದ್ದಿಸಲು ಬಂದಾಗ ತಕ್ಷಣ ಮುಖವನ್ನು ಹಿಂದೆ ಸರಿಸಿದ.

ಅನಂತರ.........?

○ ಕೊಂಪುಳೀರ ಗಣೇಶ್ ಬೋಪಯ್ಯ, ಐಕೊಳ.

# ವಿವೇಕವಾಣಿ

ಹೆಚ್ಚು ಅಂಕ ಗಳಿಸಿದವರನ್ನೂ, ರ್‍ಯಾಂಕ್ ಬಂದವರನ್ನೂ ಶ್ರೇಷ್ಠ ವಿದ್ಯಾರ್ಥಿಗಳು ಎನ್ನಬಹುದೇ? ವಿದ್ಯಾರ್ಥಿಯ ಉತ್ಕೃಷ್ಟತೆಗೂ ಆತನ ಕಲಿಕೆಯ ಮಾಧ್ಯಮಕ್ಕೂ, ಆತ ಕಲಿಯುವ ಶಾಲೆಗೂ ಏನಾದರೂ ಸಂಬಂಧ ಇದೆಯೇ?

ದೈಹಿಕ, ಬೌದ್ಧಿಕ, ನೈತಿಕ, ಆಧ್ಯಾತ್ಮಿಕ, Hand, Head, Hart, ದೃಷ್ಟಿಯಲ್ಲಿ, ವಿಕಾಸವಾಗಿರುವ ಅಥವಾ ವ್ಯಕ್ತಿತ್ವದ ಸರ್ವಾಂಗೀಣ ಅಭಿವೃದ್ಧಿಯಾಗಿರುವ ವಿದ್ಯಾರ್ಥಿಯಾಗಿರುವ ವಿದ್ಯಾರ್ಥಿಯನ್ನು ಶ್ರೇಷ್ಠವಿದ್ಯಾರ್ಥಿ ಎನ್ನಬಹುದು. ಹೆಚ್ಚು ಅಂಕ ಗಳಿಸುವುದಿರಲಿ, ರ್‍ಯಾಂಕ್ ಬರುವುದಿರಲಿ, ವಿದ್ಯಾರ್ಥಿಯ ಬೌದ್ಧಿಕ ಜ್ಞಾನಕ್ಕೆ ಪುರಾವೆ ಆದಾವೇ ಹೊರತು ಆತನ ಸರ್ವಾಂಗೀಣ ಅಭಿವೃದ್ಧಿಯ ದ್ಯೋತಕ ಆಗಲಾರವು. ಆದ್ದರಿಂದ ಕೇವಲ ಅಂಕಗಳ ಆಧಾರದ ಮೇಲೆ ವಿದ್ಯಾರ್ಥಿಯ ಮಟ್ಟವನ್ನಳೆಯುವುದರಿಂದ ಆತನ ಅಭಿವೃದ್ಧಿಯ ಪೂರ್ಣ ನೋಟವಂತೂ ದೊರೆಯಲಾರದು. ಇನ್ನು ಆತನ ಕಲಿಕೆಯ ಮಾಧ್ಯಮಕ್ಕೂ, ಶಾಲೆಗೂ, ಆತನ ಉತ್ಕೃಷ್ಟತೆಗೂ ಏನೇನೂ ಸಂಬಂಧವಿಲ್ಲ. ಈ ಉತ್ಕೃಷ್ಟತೆ ಎಂಬುವುದು ವಿದ್ಯಾರ್ಥಿಯ ಅಂತರಂಗ ವಿಕಾಸದ ಪಕ್ವಫಲವೇ ಹೊರತು ಹೊರಗಿನಿಂದ ಹೇರುವ ಸರಕಲ್ಲ. ಸಾಮಾನ್ಯವಾಗಿ ಇಂಗ್ಲೀಷ್ ಮಿಡಿಯಂನವರು ಬುದ್ಧಿವಂತರೂ ಎಂಬ ಭಾವನೆ ಪ್ರಚಲಿತವಾಗಿದೆಯಾದರೂ ಅದರಲ್ಲಿ ಹುರುಳಿಲ್ಲ. ನಿಜವಾಗಿಯು ಅವರು ಬುದ್ಧಿವಂತರಾದುದು ಆ ಮಾಧ್ಯಮದ ಪ್ರಭಾವದಿಂದಲ್ಲ, ಆ ಮಾಧ್ಯಮದ ಶಾಲೆಗಳಲ್ಲಿ ನಿರ್ಮಿಸುತ್ತಿರುವ ಕಲಿಕೆಗೆ ಯೋಗ್ಯ ಪರಿಸರದ ಪ್ರಭಾವದಿಂದ, ಆ ಮಕ್ಕಳ ರಕ್ಷಕರು ವಿದ್ಯಾಭ್ಯಾಸದ ಕಡೆಗೆ ಹರಿಸುತ್ತಿರುವ ವಿಶೇಷ ಕಾಳಜಿಯ ಪ್ರಭಾವದಿಂದ. ಕನ್ನಡ ಮಾಧ್ಯಮದ ಶಾಲೆಗಳಲ್ಲೂ ಅಂಥದೇ ಪರಿಸರ ನಿರ್ಮಿಸಿ ತರಬೇತಿ ನೀಡಿದಲ್ಲಿ, ಅಷ್ಟೇ ಸಮರ್ಪಣ ಭಾವದಿಂದ ದುಡಿಯುವ ಶಿಕ್ಷಕರಿದ್ದಲ್ಲಿ, ರಕ್ಷಕನ ಗಮನ ಮಕ್ಕಳ ಕಲಿಕೆಯ ಕಡೆಗೆ ಜಾಸ್ತಿಯಾದಲ್ಲಿ ಅಲ್ಲಿನ ಮಕ್ಕಳೂ ಅಷ್ಟೆ ಬುದ್ಧಿವಂತರಾಗದಿರರು.

—ಪಟ್ಟಡ ಪ್ರಭಾಕರ್

❁ ❁ ❁ ❁ ❁ ❁ ❁ ❁ ❁

## ಹಿತನುಡಿ

○ ನಿಧಾನವಾಗಿ ಚಿಂತಿಸಬೇಕು, ಆದರೆ ಅದನ್ನು ಕಾರ್ಯಗತವಾಗಿಸುವುದರಲ್ಲಿ ತ್ವರಿತವಾಗಿರಬೇಕು.

— ಜೇಮ್ಸ್ ಆ್ಯಲೆನ್.

## ಕನ್ನಡ ನುಡಿಗೆ ಜಯವೆನ್ನಿ

ಕನ್ನಡ ಕನ್ನಡ ವೆಂದರೆ ಎನ್ನಯ
ಆತ್ಮವೇ ತೋಷದಿ ಅರಳುವುದು ।
ಕನ್ನಡ ಕನ್ನಡ ಹಾಡಿದೆನಾದರೆ
ಎನ್ನಯ ಜಿಹ್ವೆಯೆ ನಡುಗುವುದು ॥ ೧ ॥

ಕನ್ನಡ ನುಡಿಯೂ ಕನ್ನಡ ನೆಲವು
ಎನ್ನಯ ಉಸಿರೇ ಆಗಿಹುದು ।
ಕರ್ನಾಟಕವೇ ಸಕಲರ ಆಶ್ರಯದಾಣ
ಕನ್ನಡ ಮಾತೆಯೇ ಭಾರತಿಯೂ ॥ ೨ ॥

ಎನ್ನ ಮನ ಕನ್ನಡ, ಎನ್ನ ನುಡಿ ಕನ್ನಡ
ಎನ್ನಯ ಉಲುಹೇ ಕರ್ನಾಟಕ ಸಂಗೀತ ।
ಐಕ್ಯದಿಂ ಬಾಳಿರಿ ನಾಡ ಜನರೇ
ಸಲ್ಲಿಸಿರಿ ಜನನಿಗೆ ಪ್ರಥಮ ಸನ್ಮಾನ ॥ ೩ ॥

ದ್ವಿತಿಯಾ ತೃತೀಯ ಸ್ಥಾನ ಬೇರೆನುಡಿಗೆ
ಪ್ರಪಂಚ ವ್ಯವಹಾರಕೆ ಬೇಕು ಆಂಗ್ಲಭಾಷೆ ।
ರಾಷ್ಟ್ರದ ಐಕ್ಯತೆಗೆ ಹಿಂದಿಯೆ ಸಾಕು
ಮಾತೃ ನುಡಿ ಕನ್ನಡಕೆ ವಿಶ್ವ ಕೀರ್ತಿಯ ತನ್ನಿ ॥೪॥

ಕಾಸರಗೋಡು ಮಾತೆಯ ಕಾಲ್ಗೆಜ್ಜೆಯೂ
ಬೆಳಗಾಂ ಪುರವು ಮಾತೆಯ ಮುಡಿಯೂ ।
ಬೆಂಗಳೂರು ಜನನಿಯ ನಾಭಿಯಾಗಿಹುದು
ಮೈಸೂರು ಪುರವೆ ಎದೆಯ ಮಣಿ ಹಾರವು ॥ ೫ ॥

ಕನ್ನಡಿಗರಿಗೇ ಮಾರಿರಿ ಕನ್ನಡದ ನೆಲವ
ಕಾಪಾಡಿ ಕನ್ನಡದ ಶಕ್ತಿಯನು ಚಿನ್ನ ।
ಊದಿರಿ ಜಗದಲ್ಲಿ ಕನ್ನಡದ ಕಹಳೆ
ತೋರಿರಿ ಕನ್ನಡದ ಕಂಪನು ಜಗಕೆ ॥ ೬ ॥

ಜಯಘೋಷ ಮಾಡೋಣ ನಾಡ ಜನರೇ
ಕನ್ನಡ ನುಡಿಗೆ ಜಯವಾಗಲಿ ಎನ್ನಿ ।
ಜಯ ಜಯತು ಶಾರದೆಯ ಮಣಿಹಾರವೆ
ಜಯ ಭಾರತಾಂಬೆಯ ಪುತ್ರಿ, ಕನ್ನಡ ದೇವಿ ॥ ೭ ॥

○ **ಎಂ. ಗಂಗಾಧರಗೌಡ**, ಮುಂಡೆಕೋಲು.

## ಕೊಡಗು ಸಂಗಾತಿ

ಪಕ್ಷ ಪಕ್ಷಕ್ಕೆ ಹೊಸ
ಹೊಸ ಜನ್ಮವ ತಾಳಿ ಬರುವ "ಕೊಡಗು ಸಂಗಾತಿ"
ಹೊಸ ಹೊಸತು ವರದಿಗಳ
ನವರಸ ಮಾಲೆಗಳ ತರುವ "ಕೊಡಗು ಸಂಗಾತಿ"

ಜ್ಞಾನ ದೀಪವ ಬೆಳಗುವ "ಕೊಡಗು ಸಂಗಾತಿ"
ಸ್ಫೂರ್ತಿ ಕೀರ್ತಿಗೆ ಹೆಸರಾದ "ಕೊಡಗು ಸಂಗಾತಿ"
ಕಥೆ ಕವನ ಕಾವ್ಯಗಳ ತತ್ವಗಳನು ತಿಳಿಸುತಾ
ತಿಂಗ ತಿಂಗಳಿಗೆ ಹೊಸ ಜನ್ಮವ ತಾಳಿ ಬರುವ
"ಕೊಡಗು ಸಂಗಾತಿ"

ಕಣ್ಣನ್ನು ಸೆಳೆಯುವ ಗುಲಾಬಿಯಂತೆ
ಸುವಾಸನೆ ಬೀರುವ ಮಲ್ಲಿಗೆಯಂತೆ
ಹಾಲು ಜೇನು ಒಂದಾಗುವಂತೆ
ಬರುತ್ತಿದೆ ಬಳುಕುತ್ತಾ "ಕೊಡಗು ಸಂಗಾತಿ"

ಜಾಣ ಜಾಣೆಯರ ಉಸಿರಾಗಿ
ಈ ಹೆಸರು ಸದಾ ಹಸಿರಾಗಿ
ಕೀರ್ತಿ ತರುವ ಬೆಳಕಾಗಿ
ಬರುತ್ತಿದೆ ಸೆಳೆಯುತ್ತಾ "ಕೊಡಗು ಸಂಗಾತಿ"

ಭಾಷೆ ಮತ ಧರ್ಮಗಳ
ಭೇದವಿಲ್ಲದೆ ಎಲ್ಲರಿಗೂ
ಹೊಸ ಪ್ರತಿಭೆಯ ಹೊಮ್ಮಿಸಿ
ಎಲ್ಲರಿಗೂ ಮನರಂಜನೆ ನೀಡುವ "ಕೊಡಗು ಸಂಗಾತಿ"
ಪಕ್ಷ ಪಕ್ಷಕ್ಕೆ ಹೊಸ
ಹೊಸ ಜನ್ಮವ ತಾಳಿ ಬರುವ "ಕೊಡಗು ಸಂಗಾತಿ"

○ **ಉಳುವಾರನ ಭೀಮಯ್ಯ ರಾಜೇಶ್**, ವಿಜಯನಗರ.

## ಕೊಡಗು ಗೌಡ ವಿದ್ಯಾ ಸಂಘದಿಂದ ವಿದ್ಯಾರ್ಥಿ ವೇತನ

ಕೊಡಗು ಗೌಡ ವಿದ್ಯಾ ಸಂಘದಿಂದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ, ವಿದ್ಯಾರ್ಥಿವೇತನ ನೀಡಲು ಅರ್ಜಿಗಳನ್ನು ಏಳನೇ ತರಗತಿ, ಹತ್ತನೆ ತರಗತಿ, ದ್ವಿತೀಯ ಪಿ.ಯು.ಸಿ., ಪದವಿಗಳ [ಬಿ.ಎ., ಬಿ ಎಸ್ಸಿ., ಬಿ.ಕಾಂ.] ವಾರ್ಷಿಕ ಪರೀಕ್ಷೆಯಲ್ಲಿ ಅತೀ ಹೆಚ್ಚು ಅಂಕ ಗಳಿಸಿದ ವಿದ್ಯಾರ್ಥಿಗಳು ತಮ್ಮ ಅಂಕ ಪಟ್ಟಿಯ ನಕಲು ಪ್ರತಿಯೊಂದಿಗೆ ಕುಂಟುಂಬದ ಹೆಸರನ್ನು ನಮೂದಿಸಿ ಇದೇ ತಿಂಗಳ 30ರೊಳಗಾಗಿ ಅರ್ಜಿಗಳನ್ನು ಸಲ್ಲಿಸಬಹುದಾಗಿದೆಯೆಂದು ತಿಳಿದುಬಂದಿದೆ.

# ಕೊಯ್ಲು ಮುಹೂರ್ತ ಹಬ್ಬ

ಕೊಡಗಿನಲ್ಲಿ ತಲಕಾವೇರಿ ಸಂಕ್ರಮಣ ಮತ್ತು ಹುತ್ತರಿ ಹಬ್ಬಗಳಷ್ಟೇ ಸಂಭ್ರಮದಿಂದ ಆಚರಿಸಲ್ಪಡುತ್ತಿರುವ ಇನ್ನೊಂದು ಹಬ್ಬ 'ಕೊಯ್ಲು ಮುಹೂರ್ತ.' ಗ್ರಾಮೀಣ ರೈತರ ಬಾಯಿಯಲ್ಲಿ ಇದು 'ಕೈಲ್‌ಮೂರ್ತ' ಹಬ್ಬ 'ಕೈಲ್‌ಪೊದ್' ಹಬ್ಬ. ಕಾವೇರಿ ಸಂಕ್ರಮಣದಂದು ಜನರು ಭಾಗಮಂಡಲಕ್ಕೆ ಜಾತ್ರೆ ಬರುತ್ತಾರೆ. ಸಂಗಮದಲ್ಲಿ ಸ್ನಾನ ಮಾಡುತ್ತಾರೆ. ಭಗಂಡೇಶ್ವರನಿಗೆ ಪೂಜೆ ಸಲ್ಲಿಸಿ, ತಲಕಾವೇರಿಗೆ ಹೋಗಿ ತೀರ್ಥ ಸ್ನಾನ ಮಾಡಿ ಕಾವೇರಿ ಮಾತೆಗೆ ಪೂಜೆ ಸಲ್ಲಿಸುತ್ತಾರೆ. ಹುತ್ತರಿಯಂದು ಗ್ರಾಮದೇವರಿಗೆ ಪೂಜೆ ಸಲ್ಲಿಸುತ್ತಾ. ಆದರೆ ಕೊಯ್ಲು ಮುಹೂರ್ತ ಹಬ್ಬದಂದು ಯಾವ ಜಾತ್ರೆಯೂ ಇಲ್ಲ, ದೇವರಿಗೆ ವಿಶೇಷ ಪೂಜೆಯು ಇಲ್ಲ. ಇದು ವರ್ಷದಲ್ಲೊಮ್ಮೆ ರೈತ ಕುಟುಂಬಗಳು ತಮ್ಮ ಚಿಂತೆಗಳನ್ನು ಮರೆತು ಹೊಟ್ಟೆತುಂಬ ಊಟಮಾಡಿ ನಕ್ಕು ನಲಿಯುವ ದಿನ.

ಕೊಯ್ಲು ಮುಹೂರ್ತ ಎಂಬುದು ನಾಡಮಾತಿನಲ್ಲಿ ಕೈಲ್‌ಮೂರ್ತ ಆಗಿರಬಹುದು. ಆದರೆ ಈ ಹಬ್ಬದ ಹೆಸರಿಗೂ, ಅದನ್ನು ಆಚರಿಸುತ್ತಿರುವ ಸಮಯಕ್ಕೂ ಯಾವುದೇ ಸಂಬಂಧ ಕಂಡುಬರುವುದಿಲ್ಲ. ಕೊಯ್ಲು ಮುಹೂರ್ತ ಎಂದರೆ ಬೆಳೆದು ನಿಂತ ತೆನೆಯನ್ನು ಕಟಾವು ಮಾಡುವ ಒಂದು ಶುಭ ಘಳಿಗೆ ಎಂದು ಬರುತ್ತದೆ. ಆದರೆ ಕೊಡಗಿನಲ್ಲಿ ಈ ಹಬ್ಬವನ್ನು ಆಚರಿಸುವ ಸಮಯವನ್ನು ನೋಡಿದರೆ ಈ ಅರ್ಥಕ್ಕೆ ಪುಷ್ಠಿ ದೊರೆಯುವುದಿಲ್ಲ. ಭೂಮಿಯಲ್ಲಿ ಭತ್ತದ ಬೆಳೆಯನ್ನು ನಾಟಿ ಮಾಡುವ ಕೆಲಸ ಮುಗಿಯುವ ಸಮಯಕ್ಕೆ ಈ ಹಬ್ಬವನ್ನು ಆಚರಿಸುತ್ತಾರೆ. ಭತ್ತದ ಬೆಳೆ ಕಟಾವಿಗೆ ಬರುವ ಸಮಯದಲ್ಲಿ ಅಲ್ಲ.

ಕೊಡಗಿನ ಕೆಲವು ಭಾಗಗಳಲ್ಲಿ ಈ ಹಬ್ಬವನ್ನು ಅಗೋಸ್ತು ತಿಂಗಳ 28ರಂದು ಆಚರಿಸುತ್ತಾರೆ. ಇನ್ನು ಕೆಲವು ಕಡೆ ಸೆಪ್ಟಂಬರ ತಿಂಗಳ 3 ರಂದು ಆಚರಿಸುತ್ತಾರೆ. ಪ್ರತಿವರ್ಷ ಏಪ್ರಿಲ್ ತಿಂಗಳಲ್ಲಿ ಬರುವ ಬಿಸು ಸಂಕ್ರಮಣದಂದು ಕೊಡಗಿನ ರೈತರು ಸಾಂಪ್ರದಾಯಕವಾಗಿ ತಮ್ಮ ತಮ್ಮ ಭೂಮಿಗಳಿಗೆ ಎತ್ತುಗಳನ್ನು ಹೂಡಿ ಉಳುಮೆ ಕೆಲಸ ಪ್ರಾರಂಭ ಮಾಡುತ್ತಾರೆ. ಅಗೋಸ್ತು ತಿಂಗಳ ಕೊನೆಯ ವಾರಕ್ಕೆ ಅಥವಾ ಸಪ್ಟಂಬರ್ ತಿಂಗಳ ಮೊದಲ

## ಓದುಗರಿಗೊಂದು ಸಂತೋಷದ ಸುದ್ದಿ

ಪ್ರಿಯ "ಕೊಡಗು ಸಂಗಾತಿ" ಓದುಗರಿಗೆ ಇದೊಂದು ಸಂತೋಷದ ಸುದ್ದಿ ನಮ್ಮ ಈ ಸಂಗಾತಿಯಲ್ಲಿ "ಕಣ್ಮಣಿ" ಎಂಬ ವಿಶೇಷ ಅಂಕಣವನ್ನು ತೆರೆಯಲು ನಿರ್ಧರಿಸಿದ್ದೇವೆ. ಈ ಅಂಕಣದಲ್ಲಿ ನಿಮ್ಮ ಮಕ್ಕಳ ಹುಟ್ಟು ಹಬ್ಬದ ಶುಭಾಶಯಗಳನ್ನು ಜನ್ಮ ದಿನಾಂಕಕ್ಕನುಗುಣವಾಗಿ ಸಂಗಾತಿ ಓದುಗರಿಗೆ ತಿಳಿಸುವುದಾಗಿದೆ. ಹಾಗೆಯೇ ಮದುವೆ ವಾರ್ಷಿಕೋತ್ಸವವನ್ನು ಸಹ ತಿಳಿಸಿದಲ್ಲಿ ಸಂದರ್ಭನುಸಾರವಾಗಿ ಪ್ರಕಟಿಸಲಾಗುವುದು. ಅಭಿಮಾನಿಗಳು ತಮ್ಮ ಮಕ್ಕಳ ಹುಟ್ಟು ಹಬ್ಬದ/ಮದುವೆಯ/ಮದುವೆಯ ವಾರ್ಷಿಕೋತ್ಸವವನ್ನು ಸವಿವರವಾಗಿ ಬರೆದು ಕಪ್ಪು ಬಿಳುವು ಭಾವಚಿತ್ರದೊಂದಿಗೆ ಕಳುಹಿಸಿದಲ್ಲಿ ನಾವು ಅದನ್ನು ಪ್ರಚುರಪಡಿಸುತ್ತೇವೆ. ಇದಕ್ಕೆ ಯಾವ ಸಂಭಾವನೆಯನ್ನು ಪಡೆಯುವುದಿಲ್ಲ. ಆದರೆ ಭಾವಚಿತ್ರದ ಖರ್ಚನ್ನು ಮಾತ್ರ ನೀವೇ ಭರಿಸಬೇಕಾಗುತ್ತದೆ.

**ಮಕ್ಕಳ ಪಾಸ್‌ಪೋರ್ಟ್ ಭಾವಚಿತ್ರಕ್ಕೆ ರೂ. 75-00**

**ಮದುವೆ ವಾರ್ಷಿಕೋತ್ಸವದ ಭಾವಚಿತ್ರಕ್ಕೆ ರೂ. 100-00**

ಓದುಗರು ಈ ಒಂದು ಸುವರ್ಣಾವಕಾಶವನ್ನು ಸದುಪಯೋಗ ಪಡೆದುಕೊಳ್ಳಲು ಕೋರಲಾಗಿದೆ.

—ಸಂಪಾದಕಿ

ವಾರಕ್ಕೆ ಭತ್ತವನ್ನು ನಾಟಿಮಾಡುವ ಕೆಲಸ ಮುಗಿಯುತ್ತದೆ. ಈ ಸಮಯದಲ್ಲಿಯೇ ಕೊಯ್ಲು ಮುಹೂರ್ತ ಹಬ್ಬವನ್ನು ಆಚರಿಸುತ್ತಾರೆ. ಕಷ್ಟಕರವಾದ ನಾಟಿ ಮಾಡುವ ಕೆಲಸ ಮುಗಿಸಿ ಮುಂದಿನ ಕೆಲಸ ಪ್ರಾರಂಭ ಮಾಡುವ ಮೊದಲು ಒಂದು ದಿನವಾದರೂ ವಿಶ್ರಾಂತಿ ಪಡೆದು ಸಂತಸ ಪಡುವುದಕ್ಕೆ ಈ ಹಬ್ಬದ ಆಚರಣೆ ಬಳಕೆಗೆ ಬಂದಂತೆ ಕಾಣುತ್ತದೆ. ಆದರೆ ಅಗೋಸ್ತು 28ರಂದೇ ಅಥವ ಸಪ್ತಂಬರ ತಿಂಗಳ 3 ರಂದೇ ಈ ಹಬ್ಬವನ್ನು ಯಾಕೆ ಆಚರಿಸುತ್ತಾರೆ? ಈ ದಿನಾಂಕಗಳಿಗೆ ಏನಾದರೂ ಚಾರಿತ್ರಿಕ ಮಹತ್ವವಿದೆಯೇ? ಎಂಬ ಪ್ರಶ್ನೆಗಳು ಏಳುತ್ತವೆ. ಈ ಪ್ರಶ್ನೆಗೆ ಯಾರಿಂದಲೂ ಸರಿಯಾದ ಉತ್ತರ ಸಿಗುವುದಿಲ್ಲ. ರೈತರು ನಾಟಿ ಕೆಲಸವನ್ನು ಮುಗಿಸಲು ಹಿರಿಯರು ಹಾಕಿದ ಸಾಂಪ್ರದಾಯಿಕ ಗಡುವು ಇದಾಗಿರಬಹುದು. ಏಕೆಂದರೆ ಇಂದಿಗೂ ರೈತರು ಈ ಹಬ್ಬಕ್ಕೆ ಮೊದಲು ನಾಟಿಮಾಡುವ ಕೆಲಸವನ್ನು ಮುಗಿಸಲು ಎಲ್ಲಾ ಪ್ರಯತ್ನಗಳನ್ನು ಮಾಡುತ್ತಾರೆ.

ಕೊಯ್ಲು ಮುಹೂರ್ತದಂದು ರೈತ ಕುಟುಂಬದ ಹಿರಿಯ–ಕಿರಿಯರೆಲ್ಲರಿಗೂ ಎಲ್ಲಿಲ್ಲದ ಸಂಭ್ರಮ. ಅಂದು ಎಲ್ಲರಿಗೂ ಪೂರ್ಣ ವಿಶ್ರಾಂತಿ. ನೆಂಟರಮನೆಗಳಿಗೂ ಹೋಗುವವರಲ್ಲ. ಎಲ್ಲರ ಮನೆಗಳಲ್ಲೂ ಹಬ್ಬ ನಡೆಯುತ್ತದೆ. ಪೇಟೆ, ಪಟ್ಟಣಗಳಲ್ಲಿ, ದೂರದ ಊರುಗಳಲ್ಲಿ ಕೆಲಸವಲ್ಲಿರುವ ಮನೆದೇವರಿಗಾಗಲೀ, ಗ್ರಾಮದ ದೇವರಿಗಾಗಲೀ ಬೇರೆ ಹಬ್ಬದ ದಿನಗಳಂದು ನಡೆಯುವಂತೆ ವಿಶೇಷ ಪೂಜೆ ಏನೂ ನಡೆಯುವುದಿಲ್ಲ ಊಟವೇ ಮುಖ್ಯ. ಮಾಂಸಹಾರಿಗಳಾಗಿದ್ದರೆ ಎಲ್ಲರ ಮನೆಗಳಲ್ಲೂ ಮಾಂಸದ ಅಡುಗೆಯಲ್ಲದೆ ಬೇರೆ ಇಲ್ಲ. ಎಲ್ಲರ ಮನೆಗಳಲ್ಲೂ ಹಂದಿಮಾಂಸದ ಅಡುಗೆಯನ್ನೇ ಮಾಡುತ್ತಾರೆ. ಜೊತೆಗೆ ಕೋಳಿಮಾಂಸದ ಮತ್ತು ಕುರಿಮಾಂಸದ ಅಡುಗೆಯ ಜೊತೆಗೆ ಮೀನಿನ ಪದಾರ್ಥವೂ ಇರುತ್ತದೆ. ಹಂದಿ ಮಾಂಸ ಇಲ್ಲದೆ ಕೈಲುಮುಹೂರ್ತ ಇಲ್ಲ ಎನ್ನುವಷ್ಟರ ಮಟ್ಟಿಗೆ ಆ ದಿನ ಹಂದಿಮಾಂಸಕ್ಕೆ ಮಹತ್ವವಿದೆ. ಆ ದಿನ ಕೊಲ್ಲಲೆಂದೇ ಕೆಲವು ರೈತ ಕುಟುಂಬಗಳು ಹಂದಿಗಳನ್ನು ಸಾಕಿಕೊಂಡಿರುತ್ತಾರೆ. ತಮಗೆ ಬೇಕಾದಷ್ಟನ್ನು ಉಳಿಸಿಕೊಂಡು ಮಾಂಸವನ್ನು ಬೇರೆ ರೈತರಿಗೆ ಮಾರುತ್ತಾರೆ.

ಹಂದಿ ಮಾಂಸದ ಅಡುಗೆಗೆ 'ಬಟ್ಟಲ ಹಿಟ್ಟು' ಇರಲೇಬೇಕು. ಕೊಡವ ಭಾಷೆಯಲ್ಲಿ ಇದಕ್ಕೆ 'ತಳಿಯ ಪುಟ್ಟ್' ಎನ್ನುತ್ತಾರೆ. ಹಿಂದಿನ ದಿನ ಅಕ್ಕಿಯನ್ನು ರುಬ್ಬಿ ಇಟ್ಟು, ಹುದುಗು ಬರಿಸಿ, ಊಟದ ತಟ್ಟೆಗಳಿಗೆ ಹುಯ್ದು ಹಬೆಯಲ್ಲಿ ಬೇಯಿಸಿ ಈ 'ಬಟ್ಟಲ ಹಿಟ್ಟನ್ನು ತಯಾರಿಸುತ್ತಾರೆ. ಗುಣದಲ್ಲಿ ರುಚಿಯಲ್ಲಿ ಇದು ಇಡ್ಲಿಯನ್ನು ಹೋಲುತ್ತದೆ. ಹಂದಿಮಾಂಸದ ಪದಾರ್ಥದೊಂದಿಗೆ ಬಟ್ಟಲ ಹಿಟ್ಟನ್ನು ತಿಂದರೆ ವಿಶೇಷ ರುಚಿ. ಜೊತೆಗೆ ಆ ದಿನ ಊಟಕ್ಕೆ ಅಕ್ಕಿಹಿಟ್ಟಿನ ರೊಟ್ಟಿಯನ್ನು, ತುಪ್ಪದಲ್ಲಿ ಮಾಡಿದ ಅನ್ನವನ್ನೂ, ಪಲಾವು ಮೊದಲಾದವುಗಳನ್ನೂ ಭೋಜನಕ್ಕಾಗಿ ತಯಾರಿಸುತ್ತಾರೆ. ಮಧ್ಯಪಾನ ಮಾಡುವ ಅಭ್ಯಾಸ ಇರುವವರು ಊಟಕ್ಕೆ ಮೊದಲು ತಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ವಿವಿಧ ಬಗೆಯ ಮಧ್ಯವನ್ನು ಕುಡಿಯುತ್ತಾರೆ. ಹಿರಿಯ–ಕಿರಿಯರೆಲ್ಲರೂ ಒಟ್ಟಿಗೇ ಕುಳಿತು ಸಾಮೂಹಿಕ ಭೋಜನ ಮಾಡುತ್ತಾರೆ.

ಸಾಮಾನ್ಯವಾಗಿ ಮಧ್ಯಾಹ್ನದ ಊಟದ ನಂತರ ಊರಿನಲ್ಲಿರುವ ರೈತ ಕುಟುಂಬಗಳ ಸದಸ್ಯರೆಲ್ಲರೂ ಊರಿನ ಸಾಂಸ್ಕೃತಿಕ ಚಟುವಟಿಕೆಗಳಿಗಾಗಿ ಮೀಸಲಿರುವ ಮೈದಾನದಲ್ಲಿ ಸೇರುತ್ತಾರೆ. ಇಲ್ಲಿ ಮನೋರಂಜನೆಯ ವಿವಿಧ ಕಾರ್ಯಕ್ರಮಗಳು ನಡೆಯುತ್ತವೆ. ವಿವಿಧ ಸ್ಪರ್ಧೆಗಳೂ ನಡೆಯುತ್ತವೆ. ದೊಡ್ಡ ಮರದ ಮೇಲೆ ಗಳ ನೆಟ್ಟು, ಅದರ ತುದಿಯಲ್ಲಿ ತೆಂಗಿನ ಕಾಯಿಗಳನ್ನು [ಸಾಮಾನ್ಯವಾಗಿ 3] ಕಟ್ಟಿ ಗುಂಡುಹಾರಿಸಿ ಕೆಡವುವುದು ತುಂಬಾ ಆಕರ್ಷಣೆಯ ಸ್ಪರ್ಧೆಯಾಗಿರುತ್ತದೆ. ವಿವಿಧ ಓಟದ ಸ್ಪರ್ಧೆಗಳು ಇರುತ್ತವೆ. ಚಿಕ್ಕ ಮಕ್ಕಳಿಗಾಗಿ ಕಪ್ಪೆಯಂತೆ ಕುಪ್ಪಳಿಸಿಕೊಂಡು ಓಡುವ ಸ್ಪರ್ಧೆ ನೆಲದಲ್ಲಿ ಚೆಲ್ಲಿದ ಅವರೆ ಕಾಳು [ವಿಲಾಯಿತಿ ಕಾಳು] ಬೈನೆ ಮರದ ಕಾಳು ಹೆಕ್ಕುವುದು ಮೊದಲಾದ ಸ್ಪರ್ಧೆಗಳು ನಡೆಯುತ್ತವೆ. ಮಹಿಳೆಯರಿಗಾಗಿ ಬಾಯಿಯಲ್ಲಿ ಚಮಚ ಕಚ್ಚಿಕೊಂಡು ಅದರಲ್ಲಿ ನಿಂಬೆಹಣ್ಣನ್ನಿಟ್ಟುಕೊಂಡು ಅದನ್ನು ಕೆಳಕ್ಕೆಬೀಳಿಸದೆ ಓಡುವ ಓಡುತ್ತಾ ಸೂಜಿಗೆ ನೂಲು ಹಾಕುವ, ಸಂಗೀತ ಕುರ್ಚಿ ಮೊದಲಾದ ಸ್ಪರ್ಧೆಗಳು ನಡೆಯುತ್ತವೆ. ಗೋಣಿ ಚೀಲದೊಳಗೆ ಕಾಲುಗಳನ್ನು ತೂರಿಸಿ ಎದೆಮಟ್ಟಕ್ಕೆ ಎಳೆದುಕೊಂಡು ಓಡುವಂತಹ ಸ್ಪರ್ಧೆಗಳು ಯುವಕರಿಗಿರುತ್ತವೆ.

ಸ್ಪರ್ಧೆಗಳೆಲ್ಲಾ ಮುಗಿಯುವ ಹೊತ್ತಿಗೆ ಸಂಜೆಯಾಗುತ್ತದೆ. ಕೊನೆಯಲ್ಲಿ ಒಂದು ಸಭೆಯನ್ನು ಏರ್ಪಡಿಸಿ, ಸಾಮಾನ್ಯವಾಗಿ ಊರ ಹಿರಿಯರಲ್ಲೊಬ್ಬರು ಅಧ್ಯಕ್ಷತೆ ವಹಿಸುತ್ತಾರೆ. ಸ್ಪರ್ಧೆಗಳಲ್ಲಿ ಗೆದ್ದವರಿಗೆ ಬಹುಮಾನಗಳನ್ನು ನೀಡಲಾಗುತ್ತದೆ. ಇಲ್ಲಿಗೆ ಆ ವರ್ಷದ ಕೊಯ್ಲು ಮುಹೂರ್ತ ಹಬ್ಬ ಮುಗಿಯುತ್ತದೆ. ಮತ್ತೆ ಈ ಸಂತಸ ಸಂಭ್ರಮಗಳನ್ನನುಭವಿಸಲು ಒಂದು ವರ್ಷ ಕಾಯಬೇಕಾಗುತ್ತದೆ.

ಇದು ಕೊಯ್ಲು ಮುಹೂರ್ತ ಹಬ್ಬವನ್ನು ಆಚರಿಸುವ ಸಾಮಾನ್ಯಕ್ರಮ. ಆಚರಣೆಯಲ್ಲಿ ಗ್ರಾಮದಿಂದ ಗ್ರಾಮಕ್ಕೆ ಅಲ್ಪಸ್ವಲ್ಪ ವ್ಯತ್ಯಾಸವಿರಬಹುದು. ಆದರೆ ತಿರುಳು ಮಾತ್ರ ಒಂದೇ. ಧಾರಾಕಾರವಾಗಿ ಸುರಿಯುವ ಮಳೆಯಲ್ಲಿ ಮೂರು–ನಾಲ್ಕು ತಿಂಗಳು ಭೂಮಿಯ ಉಳುಮೆ ಮತ್ತು ನಾಟಿ ಕೆಲಸದಿಂದ ಸೋತ ಜೀವಕ್ಕೆ ಒಂದು ದಿನದ ಮಟ್ಟಿಗಾದರೂ ಪೂರ್ಣ ವಿರಾಮ ಪಡೆದು ಸಂತಸದಿಂದ ನಕ್ಕುನಲಿಯುವ ಅವಕಾಶ ಪಡೆಯುವುದೇ ಈ ಕೊಯ್ಲು ಮುಹೂರ್ತ ಹಬ್ಬಾಚರಣೆಯ ಮಹತ್ವ.

**ಬೈತಡ್ಕ ಹೇಮ ಕುಂಜಪ್ಪ**, ಪಾಲೂರು.

# ನಿಮ್ಮ ಪತ್ರಗಳು

## ಚೆನ್ನಾಗಿ ಮೂಡಿಬರುತ್ತಿದೆ

ಮಾನ್ಯರೆ,

ನೀವು ಪ್ರಕಟಿಸುತ್ತಿರುವ 'ಕರಿಚಿನ್ನ' ಧಾರವಾಹಿ ತುಂಬಾ ಚೆನ್ನಾಗಿ ಮೂಡಿಬರುತ್ತಿದೆ. ಹಾಗೆಯೇ ಸಂಗಾತಿಲಿ ಬರುವ ನೆಗೆಹನಿಗಳು, ಗೌಡರ ವಿವಾಹ ಪದ್ಧತಿ, ವಿದೇಶಿ ಕನ್ಯೆಯ ಸೇಡು ಇತ್ಯಾದಿಗಳು ಚೆನ್ನಾಗಿ ಮೂಡಿಬರುತ್ತಿದೆ. ಉದ್ಯೋಗ ವಾರ್ತೆ ಬಗ್ಗೆಯೂ ಸಹ ಸ್ವಲ್ಪ ವಿವರ ಕೊಟ್ಟದ್ದೀರಿ. ಇದರಿಂದ ಹಳ್ಳಿ ಮಕ್ಕಳಿಗಂತೂ ತುಂಬಾ ಉಪಕಾರವಾಗುತ್ತದೆ. ನೀವು ಪ್ರಕಟಿಸುತ್ತಿರುವ ಸುದ್ಧಿಯ ಜೊತೆಗೆ ಕೊಡಗಿನಲ್ಲಿ ಏನೇನು ಸಂಗತಿ ನಡೆದವು, ನಡೆಯುತ್ತಿವೆ,ಅಲ್ಲಿಯ ವಿದ್ಯಮಾನಗಳ ಬಗ್ಗೆಯೂ ಸ್ವಲ್ಪ ವಿವರವಾಗಿ ಪ್ರಕಟಿಸಿ. ಅರೆಭಾಷೆ ವಿಭಾಗವನ್ನು ಇನ್ನು ಹೆಚ್ಚು ಪುಟವಲ್ಲಿ ಪ್ರಕಟಿಸಬೇಕಾಗಿ ಕೋರಿಕೆ.

**ಕೆ. ಆರ್. ಪ್ರೇಮ, ಬೆಂಗಳೂರು.**

## ಮೀಸಲಾಗಿಡಿ

ಮಾನ್ಯರೆ,

ಕೊಡಗಿನ ಗೌಡರನ್ನು [ಅರೆಭಾಷಿಕ] ನಿದ್ರೆಯಿಂದ ಎಬ್ಬಿಸಿದ 'ಸಂಗಾತಿ'ಗೆ ಅಭಿನಂದನೆಗಳು. ಮೈಸೂರು, ಕೊಡಗು ಹಾಗೂ ಬೆಂಗಳೂರಿನಲ್ಲಿರುವ ಗೌಡ ಸಂಘಟನೆಗಳು ನಿದ್ರೆಯಿಂದ ಸ್ವಲ್ಪ ಮಟ್ಟಿಗೆ ಎಚ್ಚರಗೊಂಡಿವೆ. ಇವುಗಳನ್ನು ಚುರುಕಿಗೊಳಿಸಲು ಸಂಗಾತಿಯಲ್ಲಿ 1 ಪುಟವನ್ನು ಮೀಸಲಾಗಿಡಿ ಎಂದು ಕೇಳಿಕೊಳ್ಳುತ್ತೇನೆ. ಅದರಲ್ಲಿ ಪ್ರತಿ ತಿಂಗಳು ಗೌಡ ಜನಾಂಗದ ಸಂಘಟನೆಗಳು ನಡೆಸುವ ಕಾರ್ಯಕ್ರಮಗಳ ಸಂಕ್ಷಿಪ್ತ ವರದಿ ಬರಲಿ.

**ಗೋವಿಂದಮ್ಮನ ಪ್ರವೀಣಕುಮಾರ, ಬೆಂಗಳೂರು.**

## ಪ್ರತಿಕ್ರಿಯೆ

ಮಾನ್ಯರೆ,

ಕೊಡಗು ಸಂಗಾತಿ ಪತ್ರಿಕೆಯ ಜೂನ್ 15-30 ಪಾಕ್ಷಿಕ ಪತ್ರಿಕೆಯಲ್ಲಿ ಪುಟ 7ರಲ್ಲಿ 'ಅರೆಭಾಷೆ ಎಂಬ ಪದ ಅನರ್ಹವೆ, ಎಂಬುದಾಗಿ ಪ್ರಶ್ನೆ ಹಾಕಿ ಅದರ ಕೆಳಭಾಗದಲ್ಲಿ ಸಾಕಾದಷ್ಟು ವಿವರಣೆ ಕೊಟ್ಟಿರುತ್ತಾರೆ. ಆದರೆ ಪ್ರಶ್ನೆ ಹಾಕಿ ಉತ್ತರ ನಿರೀಕ್ಷಣೆ ಮಾಡಬಹುದಿತ್ತು. ಸಮಂಜಸ ಮುಖಂಡರುಗಳು ಅಥವ ಅನುಭವಿಗಳು, ತಿಳಿದವರು ಉತ್ತರಿಸುತ್ತಿದ್ದರು. ಆದರೆ ವಿವರಣೆಯಲ್ಲೇ ಅರೆಭಾಷೆ ಗೌಡರೆಂದು ಗುರುತಿಸಿಕೊಂಡ ಮೇಲೆ ಅದನ್ನು ಮತ್ತೊಮ್ಮೆ ಅವಲೋಕನೆಗೆ ಆಸ್ಪದ ಕೊಡಬಾರದು. ಇಷ್ಟು ವಿವರಣೆಯನ್ನು ನೀಡಿದವರು ಅರೆಭಾಷೆ ಜನಾಂಗದ ಪೂರ್ವ ವಂಶಜರು ಯಾರೂ, ಮೂಲ ಸ್ಥಳ, ನಂತರ ಬೆಳೆದು ಬಂದ ದಾರಿಯ ಬಗ್ಗೆ ಇನ್ನು ಸ್ವಲ್ಪ ಗಮನಿಸಿದರೆ ಸಾಕಾಗಿತ್ತು. ಅರೆಭಾಷೆಯನ್ನು ಯಾರೂ ಅನರ್ಹ ಎಂದು ಹೇಳಲು ತಯಾರಿಲ್ಲ, ಆದರೆ ಅರೆಭಾಷೆಯೇ ಮೂಲ ಅಥವ ಮುಖ್ಯ ಭಾಷೆ ಎನ್ನುವುದು ಕಷ್ಟ. ಮತ್ತು ಸಮಾಜ ಎಂದರೆ, ನಾವು ನೀವುಗಳು ಸೇರಿರುವವರುಗಳೇ. ಸರಕಾರವೂ ಕೂಡ ಅರೆಭಾಷೆಯನ್ನು ಮುಖ್ಯವಾದದ್ದು, ಮೂಲ ಭಾಷೆ ಎಂದು ಹೇಳುವುದು ಕಷ್ಟವಾಗಬಹುದು ಎಂದು ನನ್ನ ಭಾವನೆ. ಹೀಗಿರುವಾಗ ಅರೆಭಾಷೆಯ ಮೂಲವನ್ನು ಹುಡುಕಿ ಅದಕ್ಕೆ ಚಾಲನೆ ಕೊಡಿ ಎಂದು ಭಾಷಾ ವಿಜ್ಞಾನ ವಿಭಾಗಕ್ಕೆ ಸರಕಾರದ ಮೂಲಕ ವಿನಂತಿಸಿಕೊಳ್ಳುವುದು ಸೂಕ್ತ.

ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆಯಲ್ಲಿ ಜೂನ್ 1-15ರಲ್ಲಿ ಪುಟ 9ರಲ್ಲಿ ಭಾಷಾ ಬಗ್ಗೆ ವಿವರಣೆ ಇದೆ. ಅದರ ಪೂರಕವಾಗಿ ಇನ್ನು ಹೆಚ್ಚು ಅಂಕಿ ಅಂಶಗಳನ್ನು ಹುಡುಕಿ ನೋಡಿದಾಗ ಭಾಷಾ ವಿಷಯದಲ್ಲಿ ವಿವರಣೆ ದೊರೆಯುತ್ತದೆ.

**ಟಿ. ಆರ್. ಮುದ್ದೇಗೌಡ, ಮೈಸೂರು.**

## ಸಹಾಯ ಮಾಡುತ್ತೇನೆ

ಮಾನ್ಯರೆ,

ಕೊಡಗು ಸಂಗಾತಿಯಿಂದ ಆಚಾರ-ವಿಚಾರ, ಉಡುಪು ಇವುಗಳನ್ನು ತಿಳಿದುಕೊಂಡೆ. ಬರೀ ಉಡುಪು ಭಾಷೆಯಿಂದ ಸಂಸ್ಕೃತಿ ಬೆಳೆಯಲಾರದೆಂಬುದು ನನ್ನ ಅನಿಸಿಕೆ. ಇದರಿಂದ ಪ್ರತಿಯೊಬ್ಬ ಗೌಡನು ತನ್ನ ಸಂಸ್ಕೃತಿಯ ಬಗ್ಗೆ ಪೂರ್ಣ ಜ್ಞಾನವನ್ನು ಪಡೆದಿರಬೇಕು. ಇದಕ್ಕೆ ವಿದ್ಯಾವಂತರು, ಅವಿದ್ಯಾವಂತ, ಬಡವ, ಶ್ರೀಮಂತರ ಬೇಧವಿಲ್ಲ.

ಈ ಹಿಂದೆ ಸಂಗಾತಿಯಲ್ಲಿ ಬಾರಿಕೆ ಮನುರವರು ವಿರಾಜಪೇಟೆಯಲ್ಲಿ 'ಗೌಡ ಸಮಾಜ' ಕಟ್ಟುವ ಬಗ್ಗೆ ಎಚ್ಚರಿಸಿದ್ದುದು ತಿಳಿಯಿತು. ಸಮಾಜ ಬೇಕು. ಅದು ಬರೇ ಒಂದು ಮದುವೆ ಸಮಾರಂಭಕ್ಕೆ ಮೀಸಲಾಗಿರದೆ ಗೌಡ ವಿದ್ಯಾರ್ಥಿಗಳ ಹಿತದೃಷ್ಟಿಯಿಂದಲೂ ಸಹಾಯವಾಗಬೇಕು. ಅಂದರೆ, ವಿದ್ಯಾರ್ಥಿ ವೇತನ ಹಾಗೂ ಓದುವ ವಿದ್ಯಾರ್ಥಿಗಳಿಗೆ ಉತ್ತೇಜನ ನೀಡಬೇಕು. ನಾನು ವಿದ್ಯಾರ್ಥಿಯಾಗಿದ್ದಾಗ ತರಗತಿಯಲ್ಲಿ ಪ್ರಥಮ,ದ್ವಿತೀಯ ದರ್ಜೆಯಲ್ಲಿ ಉತೀರ್ಣಳಾಗುತ್ತಿದ್ದೆ. ಆದರೆ ನನ್ನ ಇತರ ಗೆಳತಿಯರಿಗೆ ಇತರ ಸಂಘ-ಸಂಸ್ಥೆಗಳಿಂದ ವಿದ್ಯಾರ್ಥಿ ವೇತನ ಸಿಗ್ತಿತ್ತು. ನನಗೆ ಕೇವಲ ಸರಕಾರದ ವತಿಯಿಂದ 75/100ರೂ. ಮಾತ್ರ ಲಭಿಸುತ್ತಿತ್ತು. ಆಗ ನನಗೆ ಬಹಳ ನಿರಾಶೆಯಾಗುತ್ತಿತ್ತು. ಆದ್ದರಿಂದ ವಿರಾಜಪೇಟೆಯಲ್ಲಿ ಗೌಡ ಸಮಾಜ ಸ್ಥಾಪಿಸುವುದಕ್ಕೆ ನನ್ನ ಶಕ್ತಿಯಾನುಸಾರ ಸಹಾಯ ಮಾಡುತ್ತೇನೆ.

**ಚೆಟ್ಟನೆರವನ ಪೊನ್ನಪ್ಪ ಆಶಾ, ವಿರಾಜಪೇಟೆ.**

## ಅರೆ ಭಾಷಿಕ ವಿಭಾಗ

### ಧಾರವಾಹಿ-10

ಮೂಲಕಥೆ : ಅಶ್ವಥಿ ಅರವಿಂದ್

ಅರೆಭಾಷೆಗೆ : ಎಂ.ಇ. ಮಹಮ್ಮದ್

# ಕರಿ ಚಿನ್ನ

'ಆ ಬೋರುಗುಡ್ಡೆ ದೇವಯ್ಯಂಗೆ ಸೀರೆ ಉಡ್ಸಿ ನಿಲ್ಸಿರೆ ಹೋಗಿ ಹಿಡಿಯಕೆ ಹಿಂದೆ ಬೀಳಂವ ಅಲ್ಲ ಆ ರಂಜನ್. ಅಂತ ಲೋಫರ್ ಅಂವ.'

ಫ್ಯಾಕ್ಟ್ ಮಾದಯ್ಯ ಹೇಳ್ತ್.

ನಂಗ್ಯಾಕೋ ಈ ಜೀವನವೇ ಬೇಡಾಂತ ಆಗ್ತುಟ್ಟು ಮಾದಣ್ಣ' ಗೌರ ಮರ್ಡ್ತಾ ಹೇಳ್ತ್. ಅವಳು ತನ್ನ ಕಣ್ಣ್ ಒರ್ಸಿ ಕಂಡತ್.

ಇದರ್ನ ಹಂಗೆ ಬುಟ್ರೆ ಆದುಲೆ ಗೌರ. ಈ ಸಾರಿ ಅವಂಗೆ ಸರಿಯಾಗಿ ಒಂದ್ ಪಾಠ ಕಲ್ಸೊಕು. ನಿನ್ನ ಅವನೇ ಮೊದ್ವೆ ಆಗ್ವಂಗೆ ಮಾಡ್ನೆ ನೋಡು. ಇಲ್ಲದೆ ಹೋದ್ರೆ ನನ್ನ ಹೆಸರ್‌ನ ಮೊಗಚಿಹಾಕ್. ಬಾ ನೀನ್ ಹೆದ್ರ್‌ಬಡ.'

ಮಾದಯ್ಯ ಹಲ್ಲ್ ಕಚ್ಚಿಕಂಡೇ ಹೇಳ್ತ್.

ಬ್ಯಾಡ ಮಾದಣ್ಣ ಬಲವಂತದ ಮೊದ್ವೆಂದ ಪ್ರಯೋಜನ ಆದ್ಲೆ. ಮತ್ತೆ ಯಾಗಳೊ ನಾನ್ ಅವನ ಪೆಟ್ಟ್, ಕೆಟ್ಟ ಮಾತ್ ಅನುಭವಿಸ್ಕಂಡೆ ಇರ್ಕೆ ಆದು. ಅಂವ ನನ್ನ ಪೊಪ್ಪಂಗೆ ದಿನಾ ಶಾಪ ಹಾಕುದು ಕೇಳಿಕಾದು. ಹಂಗೆ ಬದ್ಕಕಿಂತ ಮೊದ್ವೆ ಆಗ್ದೆ ಹೆರ್ದು ಒಳ್ಳದ್‌ಂತ ನಂಗೆ ಅನ್ಸಿದೆ. ನಾಡ್‌ಕೊಲ್ಲಿ ಮಾದಪ್ಪನ ಮಗಳು ಕದ್ದ್ ಬಸ್ರಿಯಾಗಿ ಹೆತ್ತ್‌ತ್‌ಗಡಾಂತ ಜನ ಹೇಳ್ಬೊ, ಪರ್ವಾಗಿಲ್ಲೆ. ಆ ಮಾತ್‌ನ ನಾನ್ ಸಹಿಕಂಡನೆ. ಆ ಕುಲಗುರು ವೆಂಕಟ್ರಮಣ, ಕಾವೇರಮ್ಮ ತಾಯಿಗೆ ಎಲ್ಲಾ ಕಂಡದೆ ಅಲ್ಲ! ಅವುಕೆ ಕಂಡರೆ ಸಾಕ್.'

ಅಷ್ಟ್ ಹೇಳಿ ಗೌರ ಪುನಃ ಮರ್ಡಿಕೆ ಸುರ್‌ಮಾಡ್ತ್.

ಹೋದ್ರೆ ಕಳ್ದ್ ಹೋದ ಒಂದ್ ಅಮೂಲ್ಯ ಮುತ್ತ್ ಮತ್ತೆ ಸಿಕ್ಕಿದಸ್ಟ್ ಕುಷಿ ಆದು ನಿನ್ನ ಪೊಪ್ಪಂಗೆ. ಧೈರ್ಯ ತಕಾ ಗೌರ.

ಒಡಹುಟ್ಟಿದ ಅಣ್ಣನ ಹಿಂದೆ ನಡದಂಗೆ ಅವಳು ಫ್ಯಾಕ್ಟ್ ಮಾದಯ್ಯನ ಹಿಂದೆ ನಡ್ತ್.

* * *

ಕಳ್ದ ಸಂಚಿಕೇಲಿ,

ಗೌರನ ಹೊಟೇಲ್‌ಂದ ಸೀದ ಕರ್ಕಂಡ್ ವಾಪಸ್ ಬಂದದೆ. ಬಾಕಾಕನ ಜೀಪುನ ಬಾರೀ ಸ್ಪೀಡ್‌ಲಿ ಓಡ್ಸಿದೆ. ಕಾರಣ ಜೀಪು ಮೇಲೆ ಕೆಳ್ಗೆ ಹಾರ್‌ಕಾಕನ ಅವ್ರ ಹೊಟೇಲಿಗೂ ಕೂಸು ಸತ್ತದೆತ ಅವನ ಗ್ಯಾನ. ಆದ್ರೆ ಹಂಗೆ ಆತ್ಲೆ. ಕರ್ಕಂಡ್ ಬಂದ್ ಬೋರು ಗುಡ್ಡೆ ಜಂಕ್ಷನ್‌ಲಿ ಮಧ್ಯರಾತ್ರಿ ಒಬ್ಬಳ್ನೆ ಬುಟ್ಟ್ ರಂಜನ್ ಹೋದೆ. ಆಗ ಅಲ್ಲಿಗೆ ಸಾವುಗೆ ಹೋಗಿ ವಾಪಾಸ್ ಬರ್ವ ಪ್ಯಾಕ್ಟ್ ಮಾದಯ್ಯ ಸಿಕ್ಕಿದೆ. ಗೌರ ನಡ್ದ ವಿಷಯನೆಲ್ಲಾ ಅವನೊಟ್ಟಿಗೆ ಹೇಳ್ದೆ. ಆಗ ಅವಳ್ನ ಸಮಾಧಾನ ಮಾಡಿ ಕರ್ಕಂಡ್ ಮನೆ ಕಡೆ ಹೊರ್ಟದೆ.

ಮುಂದೆ ಓದಿ...........

'ಎಲ್ಲನೂ ಸಹಿಸಿಕಂಡನೇಂತ ಹೇಳಿ ಮತ್ತ್ಯಾಕೆ ನೀನ್ ಮರ್ಡುದು ?'

'ನಾನ್ ನನ್ನ ಪೊಪ್ಪನ ಗ್ಯಾನ ಮಾಡಿ ಮರ್ಡ್ತಾ ಒಳೆ. ಮಮ್ಮಿ ತೀರಿ ಹೋಗಿಯೂ ಬೇರೆ ಮೊದ್ವೆ ಮಾಡಿಕಣದೆ ಪೊಪ್ಪ ನಮ್ಮನ್ನ ಚಿನ್ನದಂಗೆ ಸಾಕಿತ್. ನನ್ನ ಕಾಗ್ದ ಕಂಡ್ ಪೊಪ್ಪ ಸೋಯು ತಪ್ಪಿ ಬಿದ್ದ್ ಹೋಗಿರ್ದುರ್.'

ಗೌರ ಮೂಗ್ ಹಿಂಡಿ ಬಿಸಾಕಿ ಕಣ್ಣ್ ಉಜ್ಜಿಕಂಡ್ ಹೇಳ್ತ್.

'ನಿನ್ನ ಮೇಲೆ ಅಸ್ಟ್ ಪ್ರೀತಿ ಇಟ್ಟ್ ಕಂಡ ಪೊಪ್ಪ ತನ್ನ ಮಗಳು ಬಾವಿಗೋ, ಕೆರೆಗೋ ಬಿದ್ದ್ ಸತ್ತ್‌ಹೋತ್‌ಂತ್ ಗೊತ್ತಾದ್ರೆ ಹೆಂಗೆ ಸಹಿಸಿಕಂಡದೆ ಹೇಳ್ ? ತನ್ನ ಪ್ರೀತಿಯ ಮಕ್ಕ ಎಸ್ಟ್ ಕಟ್ಟವಾದ್ರೂ ಹೆತ್ತವುಕೆ ಭಾರ ಆದುಲೆ ಗೌರ. ನಂಗೆ ಹೆಣ್ಣ್ ಮಕ್ಕ ಇಲ್ಲದೆ ಹೋದ್ರೂ ಅಪ್ಪ ಮಕ್ಕಳ ಪ್ರೀತಿ ಎಂತದ್‌ಂತ ಅರಿವ ಶಕ್ತಿ ಉಟ್ಟ್. ಆ ಶಕ್ತಿನ ದೇವ್ರು ಕೊಟ್ಟುಟು. ನೀನ್ ಈಗ ಮನೆಗೆ

ನಾಡ್‌ಕೊಲ್ಲಿ ಮಾದಪ್ಪಂಗೆ ಅಂದ್ ರಾತ್ರಿ ನಿದ್ದೇ ಬಾತ್ಲೆ. ತನ್ನ ಮಗಳ ಗ್ಯಾನ ಮಾಡಿಕಂಡ್ ಅಂವ ಅಂಗಳ್‌ಲಿ ಅತ್ತ ಇತ್ತ ನಡ್ತ್. ಒಂದ್ ದರ್ಗ್ಗ ಸದ್ದಾದ್ರೂ ಅಂವ ಕಿವಿ ನೆಟ್ಟಂಗೆ ಮಾಡಿಕಂಡ್ ಅತ್ತ ನೋಡ್‌ತಿತ್ತ್. ಎಲ್ಲೆಲ್ಲೂ ಸ್ಮಶಾನ ಮೌನ ಆವರಿಸಿತ್ತ್.

ಅಷ್ಟರ್ಲಿ ಒಂದ್ ಲೈಟ್ ಬೊಳಿ ಬಿದ್ದಂಗೆ ಆತ್. ಮಾದಪ್ಪ ಆ ಕಡೆಗೆ ನೋಡ್ತ್.

'ಯಾರದ್ ಗೌರನಾ ?'

ಮಾದಪ್ಪ ಕೇಳ್ತ್.

'ನಾನ್ ಮಾದಪ್ಪಣ್ಣ ಫ್ಯಾಕ್ಟ್ ಮಾದಯ್ಯ.'

'ಏನ್ ಮಾದಯ್ಯ ನೀನ್ ಈ ಹೊತ್ತಿಗೆ ಬಂದೊಳ ?'

ಏನ್ ಮಾಡ್ದು ಹೇಳಿ. ಒಮ್ಮೊಮ್ಮೆ ಸ್ವಂತ ಮನೆಗೆ ಹೋಗೋ ದಾರಿ ತಪ್ಪಿ ಕೆಲವು ಜನಗ ಹುಡ್‌ಕಿಯಾಡುದೂ ಉಟ್ಟು. ಅಂತ ಒಂದ್ ಜನ ನನ್ನ ಕೈಗೆ

[19ನೇ ಪುಟಕ್ಕೆ ಮುಂದುವರೆದಿದೆ]

# ಅಪ್ಪ ಬೊಬ್ಬ, ಅವ್ವ ಚೊವ್ವೆ

ಚೋಮುಣಿ ಕೂಸು ಹೊಟ್ಟೆ ಎಳ್ಕಂಡ್ ಎಳ್ಕಂಡ್ ಹರ್ದದೆ. ಮಸಿತುಂಡು ಸಿಕ್ಕಿರೆ ಬಾಯ್ಗೆ ಹಾಕಂಡ್ ಗವ್‌ಗವ್‌ತ ಅಗ್ದದೆ. ಗೊಣ್ಣೆ ಹುಳ [ನೌಕೆ ಹುಳ] ಸಿಕ್ಕಿರೆ ಪರಮಾನಂದ. ಅದರ್ನ ಹಿಡ್ಕಂಡ್ ಹಿಂಚಿ ಹಿಂಚಿ ಬಾಯ್ಗೆ ಹಾಕಂಡದೆ. ಕುದೋಲು ಬಾಚಿ ಈ ಹೆಣ್ಣ್‌ಮಕ್ಕ ಅಲ್ಲಲ್ಲೇ ಹಾಕಿಬುಟ್ಟನೆ. ಆ ಕೂದೋಲು ಉಂಡೆಸಿಕ್ಕಿರೆ ಅದೂ ಬಾಯ್ಗೆ ಹೋದೆ. ಕೋಳಿ ಹಿಕ್ಕೆ ಸಿಕ್ಕಿರೂ...ಅಯ್ಯಯ್ಯೋ' ಯಂಥ ಸಿಕ್ಕಿರೂ ಬಾಯಿಗೆ ಸೀದ ಹಾಕಂಡದೆ. ನೀವ್ಗೆ ಆ ಕೂಸ್ನ ಗ್ಯಾನ ಮಾಡ್ರೆ ವಾಕ್ ರಿಕೆ ಬಾದುಕಂಡದೆ. ಯಾಕೆಂತೇಳ್ರೆ ನೀವೆಲ್ಲಾ ಈಗ ದೊಡ್ಡೊವ್ ಆಗೊಳರಿ. ಕೂಸು ಹರ್ದಾಡ್ವಲ್ಲಿ ಶುಚಿಯಾಗಿರೋಕುಂತ ನಾವ್ಗೆ ಗೊತ್ಲ.

ಈ ಚೋಮುಣಿ ಕೂಸು ಕತ್ತಿ ಬಾಯಿನೇ ಹಿಡ್ಕಂಡದೆ. ಕುಪ್ಪಿದ್ ಗಲಾಸ್ ಮನಿ ಸಿಕ್ಕಿರೆ ಒಂದಕ್ಕೊಂದ್ ಕುಟ್ಟಿಕಂಡ್ ನಗಾಡ್ದೆ. ಮೊನ್ನೆ ಚಾಮೆವ್ವ ಚಾಪೆ ಹಾಸಿಕಂಡ್ ಕೆಳಗೆ ಮಲಗಿರ್‌ಕನ ಈ ಕೂಸು ಚಾಮೆವ್ವನ ಕೆಮಿನ ಹೀಂಪಿಕಂಡ್ ಮಲಗಿತ್‌ಗಡ !

ಕೂಸುಗ ಕತ್ತಿನೋ, ಕುಪ್ಪಿನೋ, ಬ್ಲೇಡ್‌ನೋ, ಚಾಕ್‌ನೊ ಹಿಡ್ಕಂಡಿರ್ಕನ ದೊಡ್ಡೊವು ಜೀವ ಹೋದಂಗೆ ಅರ್‌ಚಿ ಕಂಡ್ ಅದರ ಹಕ್ಕಲೆ ಹೋಕಾಗದ್. ಯಾಕೆಂತೇಳಿರೆ ನಿಮ್ಮ ಬೊಬ್ಬೆಗೆ ಕೂಸು ಗಾಬರಿಯಾಗಿ ಮೈಕೈಗೆಲ್ಲಾ ಕತ್ತಿಂದನೋ, ಬ್ಲೇಡ್‌ಂದನೋ ಗಾಯ ಮಾಡಿಕಂಡದೆ. ಅಂಥಾ ಸಮಯಲಿ ನೀವ್ ಗಾಬರಿ ಆದಂಗೆ ಆಡಿಕಾಗದ್. ಕತ್ತಿ ಬಾಯಿನೇ ಹಿಡ್ಕಂಡ ಕೂಸ್‌ನ ಕೈಂದ ಅದನ ಎಳೆಕಾಗದ್. ಬುದ್ಧಿವಂತರಾದ ನೀವು ಕೂಡ್ಲೆ ಬೇರೇನಾರ್ ವಸ್ತು ಹಿಡ್ಕಂಡ್ ಇಲ್ಲಿ ನೋಡ್ ಕಂದಾ ಎಷ್ಟ್ ಪೊರ್ಲುದ್‌ಂತ ರಾಗಎಳ್ಕಂಡ್ ಆ ಕೂಸ್ನ ಕೈಗೆ ಕೊಡಿ. ಆಗ ಅದ್ ಕೈಲಿದ್ದ ಕತ್ತಿನ ಅಲ್ಲೇ ಬುಟ್ಟ್ ನಿಮ್ಮ ಹಕ್ಕಲೆ ಬಂದದೆ. ಅದ್ಕೇ ಹೇಳ್ವ ಅಪ್ಪನೋ, ಅವ್ವನೋ ಯಾರೇ ಆಗಿರ್ಲಿ ಮಕ್ಕಳ ಮನ್‌ಸ್‌ನ ಅರ್ಥ ಮಾಡಿಕಣೊಕು. ಮನ ಶಾಸ್ತ್ರ [ಸೈಕಾಲಜಿ] ತಿಳ್ಕೊಣೊಕುಂತ. ಅದ್ ಬುಟ್ಟ್ ಹಾಕಂಡ್ ಸಮಾ ಬಡೆದೊಂದೇ ಮಕ್ಕಳ ತಿದ್ದುವ ಕ್ರಮ ಅಲ್ಲ.

ಮಕ್ಕ ಒಲೆಹಕ್ಕಲೆ ಇರ್‍ಕನ ತುಂಬಾ ಜಾಗ್ರತೆ ಮಾಡೊಕು. ಕೂಸು ಒಲೆ ಮುಂದೆ ಮಲಗಿರಕನ ಗ್ರೈಪು ಚೆಟ್ಟಿನೋ, ಅನ್ನದ ಮಡಿಕೆನೋ ಎತ್ತಿಕಂಡ್ ಕಪ್ಪ ದಾಟಿಸಿಕಾಗದ್. ಆ ಕೊದಿವ ಪಾತ್ರ ಏನಾರ್ ಕೈಬುಟ್ಟ್ ಹೋದರೆ ? ಹಿಂಗೆ ಎಷ್ಟೋ ಕಡೆ ಆಗುಟು. ಇನ್ನ್ ಕೆಲವು ಎಣ್ಣೆನ ಬಿಸಿ ಮಾಡಿಕೆ ಎಣ್ಣೆ ಚರ್‌ಕ್‌ನ ಕೆಂಡದ ಮೇಲೆ 'ಇಸಿದ್ದವೆ. ಹಚ್ಚಾ ಬಿಸಿ ಆದರೆ ಸಾಕಿತ್. ಆದ್ರೆ ಕೆಲವು ಅಯ್ಯೆಕ ಎಣ್ಣೆ ಬಿಸಿಯಾಗಿ ನೊರೆ ಬರಮುಟ್ಟ ಕಾಸಿವೆ.ಆ ಚರ್‌ಕ್‌ನ ಇಳ್ಸಿ ಅಲ್ಲೇ ಇಸಿ ಇನ್ನೊಂದು ಕೆಲ್ಸಕ್ಕೆ ಹೋದವೆ. ಆಗ ಈ ಕೂಸ್ ಹರ್‍ಕಂಡ್ ಬಂದ್ ಎಣ್ಣೆ ಚರ್‌ಕ್‌ನ ಎಳ್ದ್ ಮೈ ಮೇಲೆ ಬೀಳ್ಸಿಕಂಡ್ ಬೇಯ್ಸಿಕಂಡದೆ. ಕೊದಿವ ಎಣ್ಣೆಂದ, ನೀರ್‌ಂದ ದೂರ ಇರೊಂಗೆ ಎಚ್ಚರ ಇಸಿಕ ಣೋಕು.

ಚೋಮುಣಿ ಕೂಸ್ ಈಗ ಎದ್ದ್‌ಬಿದ್ದ್ ನಡೆಕಾವುಟು. ತೊದ್ಲಿಕಂಡ್ ಮಾತಾಡಿಕೂ ಕಲ್ತುಟು. ಅಪ್ಪ ಬೆಳಿಗ್ಗೆ ಹಾಸ್ಗೆ ಬುಡ್ದು ತಡಾದರೆ ಈ ಕೂಸು ದೊಣ್ಣೆನೋ, ಸೌದೆಕೊಳ್ಳಿನೋ ತಕ್ಕಂಡ್ ಕಂಬ್ಳಿ ಮೇಲೆ ಬಡ್ದದೆ. ಇತ್ತ ಕೊತ್ತಿಗೂ ಪೆಟ್ಟ್. ನಾಯಿಗೂ ಅಷ್ಟೇ. ಚೊಂಬುಲಿ ನೀರ್ ತುಂಬಿಕಂಡ್ ಮನೆಪೂರಾ ಚೆಲ್ಲಿದೆ. ಪುಸ್ತಕನೋ, ಕಾಗದನೋ ಏನಾರ್ ಸಿಕ್ಕಿರೆ ಬೆಂಕಿಗೆ ಹಾಕಿದೆ. ಇಲ್ಲರೆ ಹರ್ದ್ ಹಾಕಿದೆ. ಮೊನ್ನೆ ಕೂಸ್ನ ಕರ್‌ಕಂಡ್ ಅಯ್ಯೆ ನೆಂಟ್ರ ಮನೆಗೆ ಗಾಳಿ ಬೀಸಿಕೆ ಹೋಗಿತ್‌ಗಡ. ಅಲ್ಲಿ ಈ ಕೂಸು ಏನ್ ಮಾಡ್ತ್ ಗೊತ್ತುಟಾ ? ಟಿ. ವಿ. ಗ್ಲಾಸ್‌ಗೆ ಲೋಟ ಹೆರ್‌ಕಿ ಹೊಡ್ತ್‌ಗಡ ! ರೇಡಿಯೋನ ಎತ್ತಿ ಕುಕ್ಕಿತ್ ಗಡ. 'ಇಂಥಾ ಉರಿಕೊಳ್ಳಿ ಕೂಸ್ನ ಕರ್‍ಕಂಡ್ ಬರ್‌ಬಡನೇಂತ' ಆ ಮನೆಯವು ಬಯ್ದೊಗಡ.

ನೀವೇನಾರ್ ಚೋಮುಣಿ ಕೂಸ್ನ ಅಪ್ಪ ಎಲ್ಲಿಗೋಗು ಟುತ ಕೇಳಿರೆ 'ಅಪ್ಪ ಬೊಬ್ಬ' ಅಂತ ಹೇಳ್ದೆ. ಅವ್ವ ಎಲ್ಲಿಂತ ಕೇಳಿರೆ 'ಅವ್ವ ಚೊವ್ವೆ' ಅಂತ ಹೇಳ್ದೆ. ಹಿಂಗೆ ಹೇಳಿರೆ ಯಂಥಾಂತ ನೀವ್‌ಗೆ ಗೊತ್ತುಟಾ ? ಅಪ್ಪ ದನ ಮೇಯ್ಸಿಕೆ ಹೋಗುಟು, ಅವ್ವ ಸೌದೆಗೆ ಹೋಗುಟುಂತ ಅರ್ಥ.

○ಬಿ. ಆರ್. ಜೋಯಪ್ಪ, ಮಡೆ.

## ನಗೆ ಹನಿಗಳು

ಮುದುಕ : ಡಾಕ್ಟ್ರೇ ನಂಗೆ ಎಡಕಿವಿ ಕೇಳ್‌ಸ್‌ಲೆ ?

ವೈದ್ಯ : ಪ್ರಾಯದ ದೆಸೆಂದ ಹಿಂಗ್ಯಾಕೆ ಸಾಧ್ಯಉಟ್ಟು

ಮುದುಕ : ಛೇ, ಅದ್ ಹೆಂಗೆ ಸಾಧ್ಯ ? ಅಷ್ಟೇ ಪ್ರಾಯದ ಬಲಕಿವಿ ಲಾಯ್ಕ ಉಟ್ಟಲಾ !

❀ ❀ ❀

ಗಂಡ : ಏನ್ನೆ ಸಾರೆಲ್ಲಾ ಒಂದ್ ತರಹ ವಾಸನೆ ಹೊಡೀತಾ ಉಟ್ಟು ?

ಹೆಣ್ಣ್ : ಎಂಥ ಮಹಾರಾಯರೆ, ಸೋಪ್ ಹಾಕಿ ಲಾಯ್ಕ ತೊಳ್‌ದೊಳೆ !

○ ನಂಗಾರ್ ಜಿ. ಕೀರ್ತಿಪ್ರಸಾದ್, ಐಗೂರು.

[17ನೇ ಪುಟದಿಂದ ಮುಂದುವರೆದುದು]

ಸಿಕ್ಕುಟ್ಟು. ನೀವು ಸಿಟ್ಟ್ ಮಾಡದೆ ಸೇರಿ ಸ್ಮಣಕೂಂತ ಕೇಳಿಕಣೆ.'

'ನನ್ನ ಕ್ಷಮಿಸ್ಪುಡ್ ಪೊಪ್ಪಾ'

ಗೌರ ಪೊಪ್ಪನಕಾಲಿಗೆ ಬೀತ್.

'ಅಯ್ಯೋ ನನ್ನ ಕಂದಾ, ನೀನ್ ಬಂದಲ್ಲವ್ವಾ' ಮಾದಪ್ಪ ಗೌರನ ತಬ್ಬಿ ಹಿಡ್‌ಕಂಡ್ ಕಣ್ಣೀರ್ ಹಾಕಿತ್. ಒಳಗೆ ನಿದ್ದೆ ಬರದೆ ಕಟ್‌ಲ್ಲಿ ಹೊರಳಾಡಿಕಂಡಿದ್ದ ಮೀರಾ ಅಕ್ಕನ ಸ್ವರ ಕೇಳಿ ಹೊರಗೆ ಬಃತ್.

'ಅಕ್ಕಾ...'

ದುಃಖಿಲಿ ಅವಳ ಗಂಟ್ಲ್ ಕಟ್ಟೆದಂಗೆ ಆತ್. ಅವಳಿಗೆ ಮಾತಾಡಿಕೇ ಆತ್ಲೆ.

ಆ ಚಿಕ್ಕ ಸಂಸಾರದ ಪ್ರೀತಿನ ಕಂಡ್ ಫ್ಯಾಕ್ಟ್ ಮಾದಯ್ಯನೂ ಕುಸಿಲಿ ಕಣ್ಣ್ ಒರಸಿಕಂತ್. ಗೌರನ ಅವಳ ಪೊಪ್ಪನ ಕೈಗೆ ಒಪ್ಪಿ ಫ್ಯಾಕ್ಟ್‌ಮಾದಯ್ಯ ಸೀದಾ ಬೋರು ಗುಡ್ಡೆ ದೇವಯ್ಯನ ಮನೆಗೆ ಹೋತ್.

* * *

ನಡುರಾತ್ರಿ ಕಳದೂ್ರ ಬೋರ್‌ಗುಡ್ಡೆ ದೇವಯ್ಯ ತನ್ನ ಕಳ್ಳ ಲೆಕ್ಕನ ಬರ್ಕಂಡ್ ಕುದ್ದಿತ್. ಅದೆಲ್ಲ ಅವನ ಗುಟ್ಟ್‌ನ ಲೆಕ್ಕ. ಅದರ್ಲಿ ಒಂದ್ ಲಕ್ಸದಿಂದ ಕೋಟಿ ರೂಪಾಯಿವರೆಗೂ ಇತ್ತ್. ಈವರೆಗೂ ಅದರ್ನ ರೈಡ್ ಮಾಡಿ ಹಿಡಿಯಕೆ ಯಾವ ವಿಜಿಲೆನ್ಸ್‌ನವ್ಕೂ ಸಾಧ್ಯ ಆತ್ಲೆ.

ದೇವಯ್ಯನ ಮಾತಿಗೆ ಕೆಟ್ಟ ಉದ್ದೇಶ ಹೊತ್ತ್ ಹೋದವು ಒಂದೋ ತಮ್ಮ ಕೆಲ್ಸ ಕಳ್ಕಣ್‌ತಿದ್ದೊ ಅಥ್ವಾ ಕೊಲೆ ಆಗ್‌ತಿದ್ದೊ.

ಸೊಲ್ಪ ದಿನಕೆ ಹಿಂದೆ ಅವನ ಮನೆ ರೈಡ್ ಮಾಡಿಕೆ ಹೋದ ಒಬ್ಬ ವಿಜಿಲೆನ್ಸ್ ಆಫೀಸರ್ ಕೊಲೆ ಆತ್.

ಗಾಳಿಮರ ಸೋಮಯ್ಯನ ಮಙ ಚಂಗುಮಣಿಗೆ ದುಡ್ಡ್‌ಕೊಟ್ಟ್ ದೇವಯ್ಯ ಆ ವಿಜಿಲೆನ್ಸ್ ಆಫೀಸರ್‌ನ ಕೊಲೆಮಾಡ್ಸಿತ್ತ್. ಕೊಲೆಗಾರ ಚಂಗುಮಣಿ ಇಂದೂ ಜೈಲ್‌ಲೇ ಉಟ್ಟು. ದೇವಯ್ಯನ 'ಜೀವನ್ ನಿವಾಸ್'ನ ಫಾರಿನ್ ಕ್ಲಾಕ್ ಎರಡ್ ಸಾರಿ ಮ್ಯೂಸಿಕ್ ಹೊಡ್ತ್. ಅಕೌಂಟ್ ಪುಸ್ತಕನ ಮೊಡ್ಚಿಟ್ಟ್ ದೇವಯ್ಯ ಎದ್ದತ್. ನೀರ್ ಹಾಕದೆ ಎರಡ್ ಲಾರ್ಜ್ ಹಾಕಿತ್. ಬೆಡ್ ರೂಂಲಿ ಮಲಗಿದ್ದ ಮುತ್ತಕ್ಕನ ಒಂದ್ ರೀತಿ ನೋಡಿಕಂಡ್ ಅಂವ ಹಾಸಿಗೆಗೆ ಉರ್ಳಿತ್.

ಅಷ್ಟರ್ಲಿ ಕಾಲಿಂಗ್ ಬೆಲ್ ಸದ್ದಾತ್. ಹುಚ್ಚರ್ ಅಥ್ವಾ ಸಣ್ಣ ಮಕ್ಕ ಒತ್ತಿದಂಗೆ ಯಾರೋ ಸ್ವಿಚ್‌ಂದ ಕೈ ತೆಗಿಯದೆ ಹಿಡ್‌ಕಂಡಂಗೆ.

ಸೊಲ್ಪ ಹೊತ್ತ್‌ಲಿ ಮನೆಆಳ್ ಕುಟ್ಟ ಬಂದ್ ಹೇಳ್ತ್.

'ಸಾರ್...ಆ ಫ್ಯಾಕ್ಟ್ ಮಾದಯ್ಯ ಬಂದುಟ್ಟು, ನಿಮ್ಮನ್ನ ನೋಡೊಕುಗಡ.

'ಈ ನಡ್ ಇರ್‌ಲ್ಲಿ ಅವಂಗೆಂತ ಕೇಮೆ? ಅವನ ಅವ್ವನ...! ಹೋಗಿ ಬುಟ್ಟ್ ನಾಳೆ ಬೆಳಿಗ್ಗೆ ಬಾಕೆ ಹೇಳ್'

'ನಾನ್ ತುಂಬ ಹೇಳ್ದೆ ಸಾರ್. ಈಗಳೇ ನೋಡೊಕು ಗಡ. ರಂಜನ್‌ಸಾರ್‌ನ ವಿಷಯುಗಡ.'

'ರಂಜುದಾ ? ಅಂವ ನಿನ್ನೆ ಸಾಯಂಕಾಲ ಜೀಪ್ ತಕಂಡ್ ಯಾರ್‍ನೊ ಮೊದ್ವೆ ಗೇತ ಹೇಳಿ ಹೋಗಿತ್ತಲ್ಲ. ಥೂ ಒಂದೊಂದ್ ತಲೆ ತಿನ್ನೊ ಕಾರ್ಬಾರ್ ಇದೆಲ್ಲ.'

ಬೋರ್‌ಗುಡ್ಡೆ ದೇವಯ್ಯ ಪಿರಿ ಪಿರಿ ಹೇಳ್‌ಕಂಡ್ ತಲೆ ಕೆರ್‌ಕಂಡ್ ಎದ್ದತ್. ಮಾತ್‌ನ ಸದ್ದ್ ಕೇಳಿ ಹೆಣ್ಣ್ ಮುತ್ತಕ್ಕಗೂ ಎಚ್ಚರಾತ್.

'ಸ್ವಾಮಿ ವೆಂಕಟ್ರಮಣಾ, ಹೈದ ಹೋದ ಜೀಪ್ ಏನಾರ ಆಕ್ಸಿಡೆಂಟ್ ಆಗಿ ಹೋತಾ ಹೆಂಗೆ' ಮುತ್ತಕ್ಕಗೆ ಹೆದ್ರಿಕೆ ಆತ್.'

'ನೀನ್ ಸುಮ್ಮನೆ ಮಲಗಿ ನಿದ್ದೆ ಮಾಡ್. ಏನೆಲ್ಲಾ ಹೇಳ್ಬೇಡ, ನಾನ್ ಹೋಗಿ ನೋಡ್ನೆ. ಆ ನಾಲಾಯಿಕ್ ಸೂಳೆಮಙ ಮಧ್ಯರಾತ್ರಿ ಬಂದುಟ್ಟು.'

'ಮನುಷ್ಯನ ಸೊಲ್ಪ ಮಲಗಿ ನಿದ್ದೆ ಮಾಡಿಕೂ ಬಿಡ್‌ದುಲೆಲ್ಲಾ ಮಾರಾಯ ನೀನ್ ? ಎಂತದ್ ಬ್ಯಾಗ ಹೇಳ್ ?'

ದೇವಯ್ಯ ಮಾದಯ್ಯಂಗೆ ಹೇಳ್ತ್.

'ಎಂತನ ಹೇಳ್ದು ದೇವಯ್ಯಣ್ಣ, ಹುಟ್ಟದ ಮಕ್ಕ ಕೆಟ್ಟವಾದ್ರೆ ಅಪ್ಪ–ಅವ್ವ ಮಲಗಿ ನಿದ್ದೆ ಮಾಡ್ದು ಹೆಂಗೆ ಹೇಳಿ ?'

ಫ್ಯಾಕ್ಟ್ ಮಾದಯ್ಯ ಎಲ್ಲೋ ನೋಡಿಕಂಡ್ ಹೇಳ್ತ್. ನಿನ್ನ ಆ ಸ್ಟೇಜ್ ಬಾಸಣ ಎಲ್ಲಾ ಒಂದ್ ಬದಿಗೆ ಇಸ್. ವಿಷಯ ಎಂತದ್ ಬಿಡ್ಸಿ ಹೇಳ್.'

'ವಿಷಯ ಹೇಳ್ನೆ. ಆದ್ರೆ ನೀವುಗೆ ಹಾರ್ಟೋ, ಪ್ರೆಶರೋ ಇದ್ದರೆ ಮೊದ್ಲೆ ಫಿಲ್ಸ್ ತಗಂಡ್ ಕುದ್ದ್‌ಕಣಿ. ಇಲ್ದೆ ಹೋದ್ರೆ ಸಂಗತಿ ತಿಳ್ದ್ ಮೊಗುಚಿ ಬೀಳೋ ಚಾನ್ಸ್ ಉಟ್ಟು.'

'ಅದೆಲ್ಲ ನಿಂಗೆ ಹಂಗೆ ಅನ್ಸದು ಮಾರಾಯ. ಯಾವ ವಿಷಯಕ್ಕೂ ಈ ದೇವಯ್ಯ ಮೊಗುಚಿ ಬೀಳುದುಲೆ ತಿಳ್‌ಕ. ರಂಜನ್‌ಗೆ ಎಂತಾತ್ ಹೇಳ್ ?'

'ನಿಮ್ಮ ರಂಜನ್ ನಿನ್ನೆರಾತ್ರಿ ಒಂದ್ ಗೂಡೆನ ಹಾರ್ಸಿಕಂಡ್ ಹೋಗುಟ್ಟು. ಆ ನಾಡ್‌ಕೊಲ್ಲಿ ಮಾದಪ್ಪನ ಮಗಳು ಗೌರನ. ಕಾರ್ಯ ಕಳ್ದಂಗೆ ಅವಳ್ನ ಕರ್ಕಂಡ್ ಬಂದ್ ಮಧ್ಯರಾತ್ರಿಲಿ ಬೋರ್‌ಗುಡ್ಡೆ ಜಂಕ್ಷನ್‌ಲಿ ಬಿಟ್ಟ್ ಹೋಗುಟ್ಟು. ಪಾಪದ ಗೂಡೆ ! ಅದರ ಬಾಳ್ ಹಾಳಾಕೆ ಬತ್ತ್, ನೀವ್ ರಂಜನ್‌ಗೆ ಹೇಳಿ ಅವಳ್ನ ಅವಂಗೆ ಮೊದ್ವೆ ಮಾಡ್ಸೊಕು.'

ಮಾದಯ್ಯ ಹೇಳ್ತ್.

'ನಿಂಗೇನ್ ಮಾರಾಯಾ ಆ ಮಾದಪ್ಪನ ಮಗಳ ಮೇಲೆ ಅಸ್ಟ್ ಪ್ರೀತಿ, ಯಾರೂ ದಿಕ್ಕಿಲ್ಲದ ಒಂಟಿ ಜೀವ ತಾನೆ ನಿಂದ್, ಆ ಗೂಡೆನ ನೀನೇ ಮೊದ್ವೆ ಮಾಡ್‌ಕ.

ನಾನ್ಯಾಕೆ ಮೊದ್ವೆ ಆಕು. ನಿಮ್ಮ ಮಙ ರಂಜನ್‌ಗೆ ಮೊದ್ವೆ ಮಾಡ್ಸಿಕೆ ನಂಗೆ ಗೊತ್ತುಟು. ಹಣಕಿಂತ ದೊಡ್ಡದ್

ಮನ್‌ಸ್ಸಂತ ಹೇಳೊದರ್ನ ನಾನ್ ನೀವ್‌ಗೆ ತೋರ್‍ಸಿಕೊಟ್ನೆ.

ನೀನ್ ನಂಗೆ ಕಲ್ಸಿದ್ ಎಂತ ಬದ್ನೆ ಕಾಯಿ ? ಈ ಊರವು ಎಲ್ಲ ಒಂದಾಗಿ ಬಂದ್ರೂ ನಂಗೆ ಅದ್ ನೊಣಕ್ಕೆ ಸಮಾನ ಮಾರಾಯ. ನಿನ್ನನ್ನೆಲ್ಲಾ ನಾನ್ ಇದಾ ಈ ರೀತಿ ಗ್ಯಾನ ಮಾಡಿಯೋಳೆ.'

ದೇವಯ್ಯ ತನ್ನ ಕೈಯಿಂದ ನಾಕ್ ರೋಮನ ಕಿತ್ತ್ ಗಾಳಿಗೆ ಉರ್‍ಗಿತೋರ್‍ಸಿತ್.

'ದೇವಯ್ಯಣ್ಣ ಪಂಡ್‌ಕಾಲ್ದಂಗೆ ಅಲ್ಲ ಈಗ. ಈ ಸಾರಿ ನೀವ್ ಒಳ್ಳೆ ಬಂಡೆಕಲ್ಲ್‌ನೆ ತಲೆಪ್ಯಾಲೆ ಎತ್ತಿ ಹಾಕಂಡೊಳ್ರ ಅಂತ ತಿಳ್ಕಣಿ. ಉದ್ರೂ ಹಲ್ಲ್ ಲೆಕ್ಕ ಹಾಕೊ ಕಾದೆ.'

'ಹ್ಞ ದಾಟ್‌ನೆ, ನಾಯಿಸಂಗೆ ಬೊಗಳ್ ಬಡ.'

ದೇವಯ್ಯ ಒಳಗೆ ಹೋಕೆ ತಿರ್‌ಗಿ ನಿತ್ತತ್ತ್.

'ನಾಯಿದ್ ಭಾಷೆ ಮಾತ್ರ ನಿಂಗೆ ಗೊತ್ತಿರ್‍ದಂತಾತ್. ಮನ್‌ಸರ ಜೊತೆ ಹೆಂಗೆ ಮಾತಾಡೊಕು, ಹೆಂಗೆ ವರ್ತಿಸ ಕೂಂತ ನಿಂಗೆ ಬ್ಯಾಗ ತೋರ್‍ಸಿ ಕೊಟ್ನೆ.'

ಫ್ಯಾಕ್ಟ್ ಮಾದಯ್ಯ ಅಸ್ಟ್ ಹೇಳಿ ಅಲ್ಲಿಂದ ಹೋತ್. [ಸಶೇಷ]

## ಸಣ್ಣಪ್ಪನ ಸುಕ್ರವಾರ ಸಂತೆ

ಅಂದ್ ಶುಕ್ರವಾರ. ಸಾದಾರಣ ನಾಡ್ ನವು ಮಡಿಕೇರಿ ಸಂತೆಗೆ ಬಾದು. ಸಾಮಾನ್ ಎಂತೆಲ್ಲೊ ಬೇಕಾದೆ ನೋಡಿ. ಈಗ ಬೇರೆ ಸ್ಕೂಲ್ ಸುರಾದ್. ಮಕ್ಕಳಿಗೆ ಪುಸ್ತಕ, ಪೆನ್ನು, ರಬ್ಬರ್ ಎಲ್ಲಾ ಬೇಕು. ಹಿಂಗೇ ನಮ್ಮ ಸಣ್ಣಪ್ಪ ಅಂದ್ ಗದ್ದೆ ಹೂಡಿ, ಕಾಲ್ ತೊಳ್ಕಂಡ್ [ಅಲ್ಲಲ್ಲಿ ಮಣ್ಣು ಬಾಕಿ ಆವುಟು] ಊಟಮಾಡಿ ಮಾಮೂಲಿ ಸರ್ಟ್, ಸುರಾಲ್ ಹಾಕ್ಕಂಡ್ ಹಳೇ ಕಾಕಿ ಬ್ಯಾಗನ ಕೋಸಿ, ಸಣ್ಣವಂಗೆ ಹೇಳ್ತ್, ತಮ್ಮಂಣಂಗೆ ಹೇಳ್ ದನಗ ಏಕಲ್ ತಿಂಬೊ, ನಿಂಗೆಂತ ಬೇಕ್‌ನೆ ? ಸಣ್ಣಂವ ಹೇಳ್ತ್. ಕಾಯಿ, ಬೆಲ್ಲ, ದುಡ್ಡು ಇದ್ದರೆ ಹಾಳೆ ಮೊನ್ ಹಿಡ್ಕಣೆಂತಾ. ಒಮ್ಮೆಗೆ ಸಣ್ಣಪ್ಪಂಗೆ ಕೊಡೆ ಗ್ಯಾನ ಆಗಿ ಕೊಡೆ ತಕ್ಕಂಡ್ ಬಸ್ಸಿಗೆ ಬಂದೊ. ಬಸ್ ಹತ್ತ್‌ಕಾಕನ ಸುರುಲಿ ಕಂಡೆಕ್ಟರ್ ಹೇಳ್ತ್ ಅಜ್ಜ ಫಸ್ಟ್ ಆ ಕೊಡೆ ಮಡಿಚಿ. ಕಡೆಗೆ ಎಲ್ಲರ ಕಣ್ಣು ಕೊಡೆ ಮೇಲೆ. ಅಜ್ಜ ಒಮ್ಮೆ ಆ ಕೊಡೆ ದೂರಮಾಡಿ ಯಾರ್‍ಯಾರಾ ಕಣ್ಣ್ ಹೋದುತಾ. ಅ ಕೊಡೆಯೊ ಮಡ್ ಚಿರೆ ಮಡಿಸಿ ಬಾಲೆ. ಬುಳುಗಿರೇ ಬಾವಲಿ ಹಕ್ಕಿ ಹಂಗೆ ಜನರ ಬೈಗಳ ಬೇರೆ. ಹೆಂಗೋ ಸಣ್ಣಪ್ಪ ಮಡಿಕೇರಿ ಸೇರ್‍ದೊ.

ಸಂತೆಗೆ ಹೋಗಿ ಎಂತೆಲ್ಲ ಗ್ಯಾನ ಆತ್ ಅದನೆಲ್ಲಾ ತಕ್ಕಂಡೊ. ಕಡೆಗೆ ಪಿಳ್ಳೆನಗ್ಯಾನ ಆಗಿ 2 ರೂಪಾಯಿಗೆ ಹುರುಕುಲು ಕಟ್ಟಕೆ ಹೇಳ್ದೊ. ಸರಿ ಮಧ್ಯಾಹ್ನ ಆತ್. ಬ್ಯಾಗ್‌ನ ಎತ್ತಿಕಂಡ್ ಬಸ್‌ಸ್ಟಾಂಡಿಗೆ ಬಂದ್ ನಿಂತೊ. ಸುಮಾರ್ ಬಸ್ ನಿತ್ತುಟ್ಟು. ಎಡಕ್ಕೈನ ಹಣೆ ಹತ್ರ ತಂದ್ ಬಸ್ಸ್‌ನ ಬೋರ್ಡ್ ನೋಡ್ತಾ ಇದ್ದೊ. ಬಸ್ ಬಾತ್ಲೆ. ಅಜ್ಜನ ನೋಡಿ ಒಬ್ಬ ಏಜೆಂಟ್ ಕೇಳ್ತ್, ಅಜ್ಜ ನಿಮಗೆಲ್ಲಿಗೆ ಹೋಕುತಾ. ನಾ ಚೇರಂಬಾಣೆಗೆ. ಬಸ್ ಇನ್ನು ಅರ್ಧ ಗಂಟೆ ಆದೆ. ಸಣ್ಣಪ್ಪ ಗ್ಯಾನ ಮಾಡ್ದೊ. ಇನ್ನೂ ಸುಮಾರೊತ್ತುಟ್ಟು. ಚಳಿ ಬೇರೆ ಸೀದಾ ಕೆಳಗೆ ಸಾರಾಯಿ ಅಂಗ್‌ಡಿಗೆ ಹೋಗಿ ನೂರು ಹಾಕಿ ಸೀದಾ ಬಾತ್. ಹಿಂಗೇ ನಿತ್ಕಂಡಿತ್ತ್. ಅಷ್ಟೊತ್ತಿಗೆ ಅಲ್ಲಿಗೊಬ್ಬ ಬಾತ್. ಅಂವ ಎಂತಾ ಕ್ಯಾಟೊ ಗಾಳಿ ಅಪ್ಟೆ ಹೇಳ್ತ್ ನೋಡಿ, ಸಣ್ಣಪ್ಪ ಅಕ್ಕು ಬಾರಿಕ್ಯಾಬಾ ಗಾಳಿ ತೆಳ್ತ್. ಕಡೆಗೆ ಅಂವ ಅಜ್ಜಪ್ಪ ನಿಂಗ ಎಲ್ಲಿಕು ಪೊಂಡು, ನಾ ಚೇರಂಬಾಣೆಕ್. ನಿಂಗ ನಾ ಕೋಪಟೆ. ಅಜ್ಜಪ್ಪ ನಿಂಗ ಎಂತ್‌ಕ್ ಬಪ್ಪದು. ಬೊ ಡೆಂಗಿ ಮಕ್ಕ ಬರಡು. ವಯಸ್ ಬೋರೆ ಆಯಿತ್. ಹಿಂಗೆ ಇಬ್ಬರು ಅರ್ಥಂ ಬರ್ದ ಕೊಡವ ಭಾಷೆ ಸುರು ಮಾಡ್ದೊ. ಕಡೆಗೆ ಅಜ್ಜನ [ಸಣ್ಣಪ್ಪನ] ನಿಂಗಡ ಮನೆ ಎಲ್ಲಿ, ಅಲ್ಲಿ ಗೌಡಂಡ ಮನೆ ಉಂಡಲ್ಲ ಆ ಮನೆ ಕೀದಲೇ. ಅಂವ ಕೇಳ್ತ್ ಅಲ್ಲಿ ಎಲ್ಲಿ? ಅಲ್ಲಿ ಸಾಮಣು ಮನೆ ಮೇಲೆ ತೇಳ್ತ್ ! ಅಷ್ಟೊತ್ತಿಗೆ ಅಜ್ಜಂಗೆ ಏರಿಕೆ ಸುರಾವುಟು. ಸಾಮುಣು ನಾಕ್ ಭಾವ ಆಂಡು, ಸಣ್ಣಪ್ಪ ಹೇಳ್ತ್ ಅವ ನಾಡ ಮಚ್ಚುಣ. ಇಬ್ಬರು ಒಟ್ಟೆಗೆ ಹೇಳ್ದೊ ಹೇ ! ಛೇ ! ರಾಮ ! ಇದೊಳ್ಳೆ ತಮಾಸಿ ಆತ್. ಅಜ್ಜಪ ನೀವು ಸುರುಲಿ ಕೊಡಗ್‌ಭಾಷೆಲಿ ಸುರುಮಾಡ್ದರಿ. ಹಂಗೆ ನಾ ಮಾತಾಡ್ದೆ. ಈಗ ಲೆಕ್ಕಲಿ ನೀವು ನಂಗೆ ಮಾವ ಆಕು. ಮತ್ತೆ ಮನೆ ಕಡೆ ಹುಷಾರೊಳಲ್ಲ, ಮಾವ ಬಸ್ ಬಾಕೆ ಸುಮಾರೊತ್ತುಟ್ಟು. ನಂಗೂ ನಿಮ್ಮ ಬಸ್ಸೆ. ಬಸ್ನಿ ನೂರು ಕಾಟೆ ಹಾಕೋನೋತೇಳಿ ಸಣ್ಣಪ್ಪನ ಕರ್ಕಂಡ್ ಹೋತು. ಕಡೆಗೆ ಸಣ್ಣಪ್ಪ ಮನೆಗೆ ಬಂದು ಬ್ಯಾಗ್‌ನ ಮೂಲೆಗೆ ಬಿಸಾಕಿ, ಸಣ್ಣವ್ವನ ಕರ್ದೊ. ತಕನೇ ಬ್ಯಾಗ್. ಸಣ್ಣವ್ವ ಬ್ಯಾಗ್ ನೋಡಿ ಹೇಳ್ದೋ ಅಲ್ಲ ಇಂದ್ ಯ್ಯಾರ್ ಸಿಕ್ಕಿದೊ ನೀವೀಗೆ ? ಸಣ್ಣಪ್ಪಂದ್ ಒಂದೇ ಮಾತ್ ನೆಂಟಣ್ಣ !

○ ಬಾರಿಕೆ ಎನ್. ಲಿಂಗರಾಜ್,
ತಾವೂರು.

## ನಗೆಹನಿ

ಅವಳು : ಎಂತನೇ ಇಂದ್ ಒಳ್ಳೆ ಸ್ಟೈಲ್ ಮಾಡಿಕಂಡ್ ಬಂದೊಳ, ನಿನ್ನ ಗಂಡ ಚಾಕರಿ ಬದ್ಲಿಸೊಳೊ ಹೆಂಗೆ !

ಇವಳು : ನೆಗಾಡಿಕಂಡ್, ಇಲ್ಲೆ ನಾನೇ ಗಂಡನ ಬದಲಾಯಿಸ್ತೊಳೆ.

–ನಡುವಟ್ಟೀರ ಪಳಂಗಪ್ಪ, ಮಡಿಕೇರಿ.

# ಪ್ರಶ್ನಾವಳಿ ಕಾರ್ಯಕ್ರಮ

ಪುಟಾಣಿಗಳೇ ಈ ಸುಂದರ ಸುವರ್ಣ ಸ್ವತಂತ್ರ್ಯ ಮಹೋತ್ಸವ ಆಚರಿಸ್ತಾ ಇರೋ ಸಮೆಲಿ ನಿಮಿಗೊಂದು **"ಪ್ರಶ್ನಾವಳಿ ಕಾರ್ಯಕ್ರಮ"** ಇನ್ನ್ ಮುಂದೆ ನಿಮ್ಮ ಮುಂದೆ ಇದ್ದದೆ. ಏನ್ಹೇಳ್ರಿ ?

ಇನ್ನು ಮುಂದೆ ಮಕ್ಕಳ ವಿಭಾಗ ಅಂಕಣಲೀ ನಿಮಿಗೆ ಮತ್ತೆ ನಿಮ್ಮ ಬುದ್ಧಿಶಕ್ತಿಗೊಂದು ಪ್ತಶ್ನಾವಳಿ ಕಾರ್ಯಕ್ರಮನ ಹಾಕೊಕೂಂತ ನಿಮ್ಮ ಈ ಸಂಗಾತಿ ಯೋಚಿಸ್ತಾ ಉಟ್ಟ್. ಇದರ ಪ್ರಕಾರ ನಿಮಿಗೆ ಒಂದು ಸಾಮಾನ್ಯ ಪ್ರಶ್ನೆ ಕೊಡುತ್ತಾ ಒಳೆ. ಈ ಪ್ರಶ್ನೆಗೆ ಸರಿಯಾದ ಉತ್ತರ ಕಳ್ಸಿದವ್ಕೆ ಸೂಕ್ತ ಬಹುಮಾನನ ಸಹ ಸಂಗಾತಿ ಕೊಟ್ಟದೆ. ಪುಟಾಣಿಗಳೇ ಈ ಕಾರ್ಯಕ್ರಮಲಿ ನೀವು ತಪ್ಪಿಸಿಕಣದಂಗೆ ಭಾಗವಹಿಸಿರೇ ಅಂತ ನನ್ನ ಅನಿಸಿಕೆ.

ಈ ಸಂಚಿಕೆಯ ಮೊದಲ ಪ್ರಶ್ನೆ ನಮ್ಮ ರಾಷ್ಟ್ರವನ್ನಾಳಿದ ರಾಷ್ಟ್ರ ನಾಯಕರದ್ದಾಗಿರಲೀಂತ ನನ್ನ ಗ್ಯಾನ.

1. ಸ್ವಾತಂತ್ರ್ಯ ಆದಿಯಿಂದ ಇಲ್ಲಿಯವರೆಗೆ ಭಾರತ ದೇಶನ ಆಳ್ದ ಪ್ರಧಾನಿಗ ಯಾರ್‍ಯಾರ್ ? ಮತ್ತೆ ಎಷ್ಟ್ ಜನ ? ಕ್ರಮವಾಗಿ ಬರೆನಿ.
2. ಪ್ರತಿಯೊಬ್ಬ ಪ್ರಧಾನಿಗ ಎಲ್ಲಿಂದ ಎಲ್ಲಿವರೆಗೆ ದೇಶನ ಆಳ್ದೊ ? ಕ್ರಮವಾಗಿ ಬರೆನಿ ? ಅವು ಯಾವ್ಯಾವ ರಾಜ್ಯದವು ?
3. ಇವರ ಬಗ್ಗೆ ನೀವು ನಿಮಿಗೆ ಅನ್ನಿಸಿದ್ದರ್ನ ಸಂಕ್ಷಿಪ್ತವಾಗಿ ಕೆಲವು ವಾಕ್ಯಗಳ್ಲಿ ಬರ್ದ್ ಕಳ್ಸಿ.

ಹಿಂಗೆ ನೀವು ಬರ್ದ್ ಕಳ್ಸಿದ ಸರಿಯಾದ ಉತ್ತರನ ಮುಂದಿನ ಸಂಚಿಕೆಲಿ ಪ್ರಚಾರ ಮಾಡ್ತೆ. ಅದರೊಟ್ಟಿಗೆ ನಾನ್ ಸನ ಮುಂದಿನ ಸಂಚಿಕೇಂದ ಇದರ ಬಗ್ಗೆ ಕ್ರಮವಾಗಿ ಒಬ್ಬೊಬ್ಬರ ವಿವರನ ಪ್ರತಿ ಸಂಚಿಕೆಲಿ ಪ್ರಚುರ ಪಡ್ಸಿನೆ ಆತಾ. ಇಂತಿ ನಿಮ್ಮ ನಿರೀಕ್ಷೆಲಿ **ಸಂಗಾತಿ.**

ನೀವು ಬರ್ದ ಸರಿ ಉತ್ತರನ ಮುಂದಿನ ಸಂಚಿಕೆಲಿ ನೋಡಿ. ನಿಮ್ಮ ಹೆಸ್ರ್, ವಯಸ್ಸ್, ಯಾವ ತರಗತೀಂತ ವಿವರವಾಗಿ ಬರೆನಿ. ಸರಿ ಉತ್ತರ ಜಾಸ್ತಿ ಜನ ಬರ್ದರೆ, ಅಂತ ಸಮಯಲಿ ಲಾಟ್ರಿಲಿ ತೆಗ್ದ್ ಬಹುಮಾನ ನೀಡ್ತೆ. ಬಹುಮಾನ ಒಬ್ಬಂಗೆ ಮಾತ್ರ.



K.R.N.N. 240 10-01-96 TCI Kar. 09592

# ಗೌಡ ಮಹಿಳಾ ಒಕ್ಕೂಟ ಕೊಡಗು (ರಿ) ಮಡಿಕೇರಿ

## ಇವರ ವತಿಯಿಂದ ಮುಂಬರುವ ವಾರ್ಷಿಕೋತ್ಸವಕ್ಕೆ ನಮ್ಮ ಜನಾಂಗದ ಹಿರಿಯ/ಕಿರಿಯ ಹಾಗೂ ನವಯುವ ಸಂಸ್ಕೃತಿ ಚಿಂತಕರಿಗೊಂದು ಸವಾಲು !

ಹಿರಿಮೆಯನ್ನು ಕಳೆದುಕೊಂಡು ನಶಿಸಿಹೋಗುತ್ತಿರುವ ನಮ್ಮ ಕೊಡಗು ಗೌಡ ಸಂಸ್ಕೃತಿ ಇವರ ಜೀವಂತಿಕೆಯ ಚಿಂತನೆಯೊಂದಿಗೆ ಮುಂದಿನ ಪೀಳಿಗೆಗೆ ಪರಿಜ್ಞಾನ ಮತ್ತು ಉಳಿವು ಬಗ್ಗೆ ಒಂದು ಅವಲೋಕನವನ್ನು ಸ್ವಂತ ಕೈ ಬರಹದಿಂದ ಮೂರು ಪುಟಗಳಿಗೆ ಮೀರದಂತೆ ಪ್ರಬಂಧ ಸ್ಪರ್ಧೆಯನ್ನು ಏರ್ಪಡಿಸಲಾಗಿದೆ.

ಪ್ರತಿಭಾವಂತ ಹಿರಿಯ ಹಾಗೂ ಯುವ ಪ್ರಬಂಧ ಸ್ಪರ್ಧಿಗಳು ನಮ್ಮ ಸಂಸ್ಕೃತಿಯನ್ನು ಜ್ಞಾಪಕದಲ್ಲಿಟ್ಟುಕೊಂಡು **ಅಂದು-ಇಂದು-ಮುಂದೆ?** ಎಂಬ ಚಿಂತನೆಯೊಂದಿಗೆ ಉಳಿಸಿ ಬೆಳೆಯಿಸುವ ಅಭಿಪ್ರಾಯಗಳನ್ನು ಇಲ್ಲಿ ಕೋರಲಾಗಿದೆ.

ಉತ್ತಮ ಪ್ರಬಂಧನನ್ನು ಆಯ್ದು ಐದನ್ನು ನಮ್ಮ ಸಮಾಜದ ಹಿರಿಯ ಹಾಗೂ ಗಣ್ಯ ವ್ಯಕ್ತಿಗಳ ಮುಂದೆ ಪರಾಂಬರಿಸಿ ಬಹುಮಾನ ನೀಡಲಾಗುವುದು. ಇವುಗಳನ್ನು **"ಕೊಡಗು ಸಂಗಾತಿ"** ಪಾಕ್ಷಿಕ ಸಂಚಿಕೆಯಲ್ಲಿ ಅವರವರ ಭಾವಚಿತ್ರದೊಂದಿಗೆ ಪ್ರಕಟಿಸಲಾಗುವುದು. ವಾರ್ಷಿಕೋತ್ಸವದ ಸಂದರ್ಭದಲ್ಲಿ ಮಹಿಳೆಯರಿಗೆ ತಿಂಡಿ, ಉಪ್ಪಿನಕಾಯಿ, ಸಂಗೀತ, ಸೋಬಾನೆ, ನಾಟಕ, ದೇಶಭಕ್ತಿಗೀತೆಗಳು, ವಿವಿಧ ನೃತ್ಯ, ನಾಟ್ಯ, ರಂಗೋಲಿ, ಚಿತ್ರಕಲೆ, ಹೂವಿನ ಪ್ರದರ್ಶನ ಮತ್ತು ಮಾರಾಟ ಕುಂಡಗಳು—ಇವುಗಳನ್ನು ಸ್ಪರ್ಧೆಗೆ ಇಡಬಹುದು. ಅಲ್ಲದೆ ಗ್ರಾಮೀಣ ಮಟ್ಟದ ಧಾರ್ಮಿಕ ಸಾಂಸ್ಕೃತಿಕ ಕತೆಗಳ ಏಕಪಾತ್ರಾಭಿನಯ, ಗುಡಿ ಕೈಗಾರಿಕೆ ಹಳೇಕಾಲದಲ್ಲಿದ್ದ ಹುಲ್ಲು, ನಾರು, ಬಿದಿರು, ಮರ, ಎಲೆ, ವಾಟೆ, ಬೆತ್ತ, ಮುಡಂಗಿ [ಕೇದಿಗೆ] ನೊಜ ಇತ್ಯಾದಿಗಳಿಂದ ತಯಾರಿಸಿದ ವಸ್ತುಗಳನ್ನು ಪ್ರದರ್ಶಿಸಬಹುದು. ಭಾಗವಹಿಸಲಿಚ್ಛಿಸುವವರು ರೂ.**25**/-ನ್ನು ಕಟ್ಟಿ ಈ ಮೇಲಿನ ಸ್ಪರ್ಧೆಗಳಲ್ಲಿ ಭಾಗವಹಿಸಿ, ತಮ್ಮ ಪ್ರತಿಭೆಯನ್ನು ವೃದ್ಧಿಸಿಕೊಳ್ಳಲು ಈ ಮೂಲಕ ಕೇಳಿಕೊಳ್ಳಲಾಗಿದೆ.

ನಮ್ಮ ಒಕ್ಕೂಟಕ್ಕೆ 18 ವರ್ಷದ ಮೇಲ್ಪಟ್ಟ ಬುದ್ಧಿ ಸ್ವಾಸ್ಥವಿರುವ ಪ್ರತಿಯೊಬ್ಬ ಮಹಿಳೆಯು ರೂ. **110**/-ನ್ನು ಪಾವತಿ ಮಾಡಿ ಸದಸ್ಯರಾಗಬೇಕಾಗಿ ಈ ಮೂಲಕ ವಿನಂತಿಸುತ್ತೇವೆ.

ಆಧುನಿಕತೆಯ ಶರವೇಗದ ಬದುಕಿನಲ್ಲಿ **ನಶಿಸುತ್ತಿರುವ ಸಂಸ್ಕೃತಿಯ** ನಮ್ಮತನವನ್ನು ನಾವೆಲ್ಲರೂ **ಸಂಘಟಿತರಾಗಿ** ಉಳಿಸಲು ಶ್ರಮಿಸೋಣ. ಎಲೆಮರೆಯಲ್ಲಡಗಿರುವ ನಿಮ್ಮ ಪ್ರತಿಭೆಗಳನ್ನು ಹಿರಿಯ ಹಾಗೂ ಕಿರಿಯರಿಗಾಗಿ ಪ್ರದರ್ಶಿಸಲು ಇದೊಂದು **ಸುವರ್ಣಾವಕಾಶ.**

ಭಾಗವಹಿಸುವ ಸ್ಪರ್ಧಿಗಳು ತಮ್ಮ ಹೆಸರುಗಳನ್ನು ಪತ್ರದ ಮುಖೇನ ತಾ॥ 20-10-1998ರ ಒಳಗಡೆ ಈ ಕೆಳಗಿನ ವಿಳಾಸಕ್ಕೆ ತಿಳಿಸುವುದು.

**ಹೆಚ್ಚಿನ ಮಾಹಿತಿಗಾಗಿ :**

**ಶ್ರೀಮತಿ ಚೇಯಂಡಿರ ರಾಧಯಾಧವ**
ಅಧ್ಯಕ್ಷರು, ಗೌಡ ಮಹಿಳಾ ಒಕ್ಕೂಟ
20-7 (1) ದೇಚೂರು, ಮಡಿಕೇರಿ
ಕೊಡಗು ಜಿಲ್ಲೆ-571 201
ದೂರವಾಣಿ : **08272/29028.**

**ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ**
ಸಂಚಾಲಕಿ : ಗೌಡ ಮಹಿಳಾ ಒಕ್ಕೂಟ
21-16 ರೇಸ್‌ಕೋರ್ಸ್ ರಸ್ತೆ, [L.I.C. ಹತ್ತಿರ]
ಮಡಿಕೇರಿ, ಕೊಡಗು ಜಿಲ್ಲೆ-571 201.
ದೂರವಾಣಿ : **08272/28047**

---

**ಗೌಡ ಮಹಿಳಾ ಒಕ್ಕೂಟದ ಅಧ್ಯಕ್ಷರು ಮತ್ತು ಸದಸ್ಯರು**

Printed by M K Thammaiah and Published byKodagu Sangathi on behalf of Pattada P. Sheelamani and Printed at ASHIRWAD PRINTERS 180/A, 6th Main, Vinayakanagar, Mysore-12 Published at Mysore, Editor PATTADA. P. SHEELAMANI, No. 35 1st Cross, 4th Block Near Divisional Telephone Office) Jayalakshmipuram, Mysore-570 012 Phone : 516771